ಉಪನ್ಯಾಸ ಗ್ರಂಥಮಾಲೆ
೯೯

# ಪ್ರಾಚೀನ
# ಗ್ರೀಕರ ಅಮರ ಕೊಡುಗೆಗಳು

ಡಿ. ಟಿ. ಜೋಶಿ, ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೯೭೦

# ಉಪನ್ಯಾಸ ಗ್ರಂಥಮಾಲೆ

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

1. ಭವಭೂತಿ — ಕೆ. ಕೃಷ್ಣಮೂರ್ತಿ
2. ಮನೋರೋಗಗಳು — ಎನ್. ಆರ್. ಕುಲಕರ್ಣಿ
3. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲುತನ — ಎನ್. ಪಿ. ಪಾಟೀಲ
4. ಗಾದೆಗಳು — ಎ. ಕೆ. ರಾಮಾನುಜನ್
5. ಭಾರತದಲ್ಲಿ ಜಾತಿಪದ್ಧತಿ — ವ್ಹಿ. ಎಸ್. ಡಿ'ಸೋಜಾ
6. ಕೀಟಕ ಪಿಡುಗುಗಳ ಸಮೀಕ್ಷಣೆ — ಎಸ್. ಎಸ್. ಕಟಗಿಹಳ್ಳಿಮಠ
7. ರಾಜಕೀಯ ಪಕ್ಷಗಳು — ಎನ್. ರಾಜಗೋಪಾಲರಾವ್
8. ಸ್ವಾದಿ ಅರಸುಮನೆತನ — ಎಸ್. ಎಸ್. ಮಾಳವಾಡ
9. ಮಕ್ಕಳ ಶಿಕ್ಷಣ — ಡಿ. ಎಸ್. ಕರ್ಕಿ
10. ಮೂಢ ನಂಬಿಕೆಗಳು — ಎಲ್. ಆರ್. ಹೆಗಡೆ
11. ಸಂಸ್ಕೃತ ಕವಯಿತ್ರಿಯರು — ಕೆ. ಟಿ. ಪಾಂಡುರಂಗಿ
12. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ — ಬಿ. ವಿರೂಪಾಕ್ಷಪ್ಪ
13. ಸಾರ್ವಜನಿಕ ಆಡಳಿತ — ಜಿ. ಎಸ್. ಹಾಲಪ್ಪ
14. ವಿಚಾರವಾದ — ಗೌರೀಶ ಕೈಕಿಣಿ
15. ಮಹಾಕವಿ ಮಿಲ್ಟನ್ — ಜಿ. ಎಸ್. ಆಮೂರ
16. ಭಾರತದಲ್ಲಿ ಗ್ರಂಥಾಲಯ ಪ್ರಸಾರ — ಕೆ. ಎಸ್. ದೇಶಪಾಂಡೆ
17. ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ — ಬಿ. ಎಚ್. ಶ್ರೀಧರ

# ಪ್ರಾಚೀನ
# ಗ್ರೀಕರ ಅಮರ ಕೊಡುಗೆಗಳು

ಉಪನ್ಯಾಸ ಗ್ರಂಥಮಾಲೆ

೯೯

ಪ್ರಾಚೀನ

# ಗ್ರೀಕರ ಅಮರ ಕೊಡುಗೆಗಳು

ಡಿ. ಟಿ. ಜೋಶಿ, ಎಂ. ಎ.



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೭೦

ಪ್ರಕಾಶಕರು :
ಎಸ್. ಎಸ್. ಒಡೆಯರ, ಎಂ. ಎ., ಎಲ್ ಎಲ್. ಬಿ.,
ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ, ೫,೦೦೦ ಪ್ರತಿಗಳು
ಜೂನ, ೧೯೬೦



ಬೆಲೆ : ೨೫ ಪೈಸೆ

ಮುದ್ರಕರು :
ಫ. ಶಿ. ಭಾಂಡಗೆ
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ)
ಗಂಗಾಪೂರಪೇಟೆ, ಗದಗ.

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಗಳ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪ-ನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಅದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸ

ಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವ ವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜ ವಾಗಿಯೂ ಸಂತೋಷದ ಸಂಗತಿಯಾಗಿದೆ.

ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೆ ತೃಪ್ತಿಗೊಳ್ಳದೆ, ಇವು ಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆಯಿಸಿ, ಸುಲಭ ವಾದ ಬೆಲೆಗೆ ಪ್ರಕಟಿಸಿ ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಯೋಜನೆ ಈಗ ಹತ್ತು ವರ್ಷಗಳ ಪೂರ್ವದಲ್ಲಿಯೇ ಈ 'ಉಪನ್ಯಾಸ ಗ್ರಂಥಮಾಲೆ'ಯ ರೂಪದಲ್ಲಿ ಮೂರ್ತಗೊಂಡು ಮುನ್ನಡೆದಿದೆ. ಈ ಮಾಲೆಯಲ್ಲಿ ಇದುವರೆಗೆ ಬೇರೆ ಬೇರೆ ವಿಷಯಗಳನ್ನು ಕುರಿತು ೯೮ ಪುಸ್ತಕಗಳು ಪ್ರಕಟವಾಗಿವೆ. ಅಲ್ಪಾವಧಿಯಲ್ಲಿಯೇ ಈ ಪುಸ್ತಕಗಳ ಸಾವಿರಾರು ಪ್ರತಿಗಳು ಮಾರಾಟಗೊಂಡಿವೆ. ಕೆಲವು ಪುಸ್ತಕಗಳು ಮೂರನೆಯ ಆವೃತ್ತಿಯನ್ನೂ ಕಾಣುತ್ತಿರುವುದು ಮಾಲೆಯ ಉಪಯುಕ್ತ-ತೆಗೂ, ಜನಪ್ರಿಯತೆಗೂ ಸಾಕ್ಷಿಯಾಗಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆ ಕೊಟ್ಟು, ಉಪನ್ಯಾಸಕರು ಪುಸ್ತಕಗಳನ್ನು ಬರೆದು ಕೊಡುತ್ತಿರುವದು ಶ್ಲಾಘ್ಯವಾದ ವಿಷಯ. ಇದಕ್ಕಾಗಿ ಈ ಲೇಖಕ ಮಹಾಶಯರಿಗೆ ವಿಶ್ವವಿದ್ಯಾ-ಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ನಮ್ಮ ಈ ಯೋಜನೆಯನ್ನು ಮೆಚ್ಚಿಕೊಂಡು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ಧನಸಹಾಯವೀಯುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ಈ ಕಿರುಹೊತ್ತಿಗೆಗಳ ಪ್ರಸಾರ ನೂರ್ಮಡಿಗೊಂಡು ತನ್ಮೂಲಕ ನಮ್ಮ ಜನತೆಯು ಜ್ಞಾನಾಸಕ್ತಿ ಪುಷ್ಟಿಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧೨—೬—೧೯೭೦

# ನಿವೇದನೆ

ಕರ್ನಾಟಕ ವಿಶ್ವವಿದ್ಯಾಲಯದ 'ವ್ಯಾಸಂಗ ವಿಸ್ತರಣ ಶಾಖೆ'ಯು ಉತ್ತರ ಕನ್ನಡ ಜಿಲ್ಲೆಯಲ್ಲಿ ಸಾಲಕೋಡ್-ಅರೆ ಅಂಗಡಿಯ ಎಸ್. ಕೆ. ಪಿ. ಹಾಯರ್ ಸೆಕೆಂಡರಿ ಸ್ಕೂಲಿನ ಆಶ್ರಯದಲ್ಲಿ ಏರ್ಪಡಿಸಿದ್ದ ಉಪನ್ಯಾಸ ಶಿಬಿರದಲ್ಲಿ ನಾನು ದಿನಾಂಕ ೨೭-೨-೧೯೭೦ ರಂದು "ಪ್ರಾಚೀನ ಗ್ರೀಕರ ಅಮರ ಕೊಡುಗೆಗಳು" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದೆನು. ಈ ಕಿರು ಹೊತ್ತಿಗೆಯಲ್ಲಿ ಅದೇ ವಿಷಯವನ್ನು ಸರಳ ಶೈಲಿಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದ್ದೇನೆ. ನನ್ನ ಭಾಷಣವನ್ನು ಅತ್ಯಂತ ಆಸಕ್ತಿಯಿಂದ ಆಲಿಸಿದ ಅರೆ-ಅಂಗಡಿ ಶ್ರೋತೃವರ್ಗಕ್ಕೆ ಕೃತಜ್ಞನಾಗಿದ್ದೇನೆ.

ಈ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ಹುಟ್ಟಿಸಿ, ಸೂಕ್ತ ಸಲಹೆಗಳನ್ನಿತ್ತು ಉಪಕರಿಸಿದ ನನ್ನ ವಿದ್ಯಾಗುರುಗಳಾದ ಡಾ|| ಜಿ. ಎಸ್. ದೀಕ್ಷಿತ ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳು ಸಲ್ಲುತ್ತವೆ. ಬರವಣಿಗೆಯ ಕಾಲದಲ್ಲಿ ಸಲಹೆಗಳನ್ನಿತ್ತ ನನ್ನ ಹಿರಿಯ ಮಿತ್ರರಾದ ಪ್ರೊ. ಎಂ. ಅಕಬರ ಅಲಿ ಅವರಿಗೂ, ಸಂದರ್ಭ ಗ್ರಂಥಗಳನ್ನು ಒದಗಿಸಿ ಕೊಟ್ಟ ನಮ್ಮ ಕಾಲೇಜಿನ ಲೈಬ್ರೇರಿಯನ್ ಶ್ರೀ ಎಚ್. ಎನ್. ಶಾನಭಾಗ ಅವರಿಗೂ ಋಣಿಯಾಗಿದ್ದೇನೆ.

ಉಪನ್ಯಾಸ ಶಿಬಿರದಲ್ಲಿ ಭಾಷಣ ಮಾಡುವುದಕ್ಕೂ, ಆ ಭಾಷಣದ ವಿಷಯುವನ್ನು ಈ ಪುಸ್ತಕದಲ್ಲಿ ನಿರೂಪಿಸುವುದಕ್ಕೂ ಅವಕಾಶ ಕಲ್ಪಿಸಿ ಕೊಟ್ಟಿರುವ ವ್ಯಾಸಂಗ ವಿಸ್ತರಣ ಶಾಖೆಯ ಡೈರಕ್ಟರರಾದ ಶ್ರೀ ಚೆನ್ನವೀರ ಕಣವಿ ಅವರಿಗೂ, ವಿಶ್ವವಿದ್ಯಾಲಯದ ಅಧಿಕಾರಿ ವರ್ಗದವರಿಗೂ ನನ್ನ ಕೃತಜ್ಞತೆಗಳು.

ಕೆ. ಜಿ. ಎಸ್ ಆರ್ಟ್ಸ ಆ್ಯಂಡ್
ಸೈನ್ಸ್ ಕಾಲೇಜ, ಕಾರವಾರ
೧೦—೪—೧೯೭೦

**ಡಿ. ಟಿ. ಜೋಶಿ**

# ಪರಿವಿಡಿ

## ಅಧ್ಯಾಯ ೧.

# ಪ್ರಸ್ತಾವನೆ

ಈ ಕಿರು ಹೊತ್ತಿಗೆಯ ವಿಷಯವಾದ ಪ್ರಾಚೀನ ಗ್ರೀಕರ ಅಮರ ಕೊಡುಗೆಗಳನ್ನು ಅರಿತುಕೊಳ್ಳುವ ಮೊದಲು ಗ್ರೀಸಿನ ಭೌಗೋಲಿಕ ಸಂಗತಿಗಳು ಗ್ರೀಕ್ ನಾಗರಿಕತೆಯ ಮೇಲೆ ಬೀರಿದ ಪ್ರಭಾವ, ಗ್ರೀಕ್ ನಾಗರಿಕತೆಯ ಉದಯ, ವಿಕಾಸ ಮತ್ತು ಪತನದ ಪರಿಚಯ ಮಾಡಿಕೊಳ್ಳುವದು ತೀರ ಅಗತ್ಯ.

**ಭೌಗೋಲಿಕ ಸಂಗತಿಗಳ ಪ್ರಭಾವ**

ಗ್ರೀಸ್ ದೇಶ ದಕ್ಷಿಣ ಯುರೋಪಿನಲ್ಲಿರುವ ಮೂರು ದ್ವೀಪಕಲ್ಪಗಳಲ್ಲಿ ಒಂದಾಗಿದೆ. ಗ್ರೀಸಿನ ಉತ್ತರಕ್ಕೆ ಬಾಲ್ಕನ್ ಪರ್ವತಾವಳಿ, ಪೂರ್ವಕ್ಕೆ ಈಜಿಯನ್ ಸಮುದ್ರ, ಪಶ್ಚಿಮಕ್ಕೆ ಏಡ್ರಿಯಾಟಿಕ್ ಸಮುದ್ರ ಇವೆ. ಈ ದೇಶಕ್ಕೆ ಛಿನ್ನವಿಚ್ಛಿನ್ನವಾದ ಕರಾವಳಿಯಿರುವದರಿಂದ ಅನೇಕ ಉತ್ತಮ ಬಂದರಗಳ ಸೌಕರ್ಯ ಲಭಿಸಿತು. ಗ್ರೀಸ್ ಅನೇಕ ಚಿಕ್ಕ ದ್ವೀಪಗಳಿಂದ ಸುತ್ತುವರಿಯಲ್ಪಟ್ಟಿದೆ ಪಶ್ಚಿಮದಲ್ಲಿರುವ ಅಯೋನಿಯನ್ ನಡುಗಡ್ಡೆಗಳು ಇಟಲಿಯೊಂದಿಗೆ ಸಂಪರ್ಕ ಹೊಂದಲು ಸಹಾಯಕವಾದವು. ಹೀಗೆ ಜಲಪರ್ಯಟನ ಜೀವನಕ್ಕೆ ಅನುಕೂಲವಾದ ನೈಸರ್ಗಿಕ ಸೌಲಭ್ಯಗಳನ್ನು ಪ್ರಾಚೀನ ಗ್ರೀಕರು ಪಡೆದಿದ್ದರು. ಇದರಿಂದಾಗಿ ಅವರು ತಮ್ಮ ನೆರೆಯ ನಾಡುಗಳ ಸುಸಂಸ್ಕೃತ ಜನರ

ಸಂಪರ್ಕ ಪಡೆದು. ಆ ಸಂಸ್ಕೃತಿಗಳ ಉತ್ತಮಾಂಶಗಳನ್ನು ಅಳ ವಡಿಸಿಕೊಳ್ಳಲು ಸಾಧ್ಯವಾಯಿತು.

ಗ್ರೀಸ್ ಬೆಟ್ಟಮಯ ಪ್ರದೇಶ. ಪರ್ವತ ಸಾಲುಗಳು ಈ ದೇಶವನ್ನು ಸಣ್ಣ ಸಣ್ಣ ಭಾಗಗಳಾಗಿ ವಿಭಾಗಿಸಿವೆ. ಒಂದು ಭಾಗದ ಜನರು ಇನ್ನೊಂದು ಭಾಗಕ್ಕೆ ಹೋಗುವುದು ಸುಲಭ ವಾಗಿರಲಿಲ್ಲ. ಇದಲ್ಲದೆ. ಅಲ್ಲಿಯ ನದಿಗಳು ನೌಕಾಯಾನಕ್ಕೆ ಅನುಕೂಲವಾಗಿಲ್ಲ. ಭೌಗೋಲಿಕ ಅನೈಕ್ಯತೆಯಿಂದಾಗಿ ರಾಜ ಕೀಯ ಐಕ್ಯತೆಗೆ ಅಡ್ಡಿಯುಂಟಾಯಿತು; ಇಡೀ ಗ್ರೀಸ್ ದೇಶ ವನ್ನೊಳಗೊಂಡ ಸಾಮ್ರಾಜ್ಯವನ್ನಾಗಲಿ, ಏಕರೂಪ ಆಡಳಿತ ವ್ಯವಸ್ಥೆಯನ್ನಾಗಲಿ ನಿರ್ಮಿಸುವುದು ಸಾಧ್ಯವಾಗಲಿಲ್ಲ. ಸಮುದ್ರ ಮತ್ತು ಬೆಟ್ಟ ಪ್ರದೇಶಗಳ ಆ ಜನರು ಸ್ವಾಭಾವಿಕವಾಗಿಯೇ ಸ್ವಾತಂತ್ರ್ಯಪ್ರಿಯರೂ ಸಾಹಸಿಗಳೂ ಆಗಿದ್ದರು.

ಗ್ರೀಸಿನ ಭೂಮಿ ಫಲವತ್ತಾದುದಲ್ಲ. ಸಮೃದ್ಧವಾದ ಕೃಷಿ ಜೀವನ ಅಸಾಧ್ಯ. ಜನಸಂಖ್ಯೆ ಹೆಚ್ಚಿದಂತೆ ಆಹಾರ ಸಮಸ್ಯೆ ಬಲಿಯಿತು. ಆದ್ದರಿಂದ ಗ್ರೀಕರು ಸುತ್ತುಮುತ್ತಲಿನ ದ್ವೀಪ ಗಳಿಗೆ ವಲಸೆ ಹೋಗಬೇಕಾಯಿತು. ಅವರು ಥೆಸ್ಸಲಿ, ಸಿಸಿಲಿ ಮುಂತಾದ ಹೊರನಾಡುಗಳಿಂದ ಆಹಾರ ಧಾನ್ಯಗಳನ್ನು ತರಿಸಿ ಕೊಳ್ಳುತ್ತಿದ್ದರು ಮತ್ತು ಆ ನಾಡುಗಳಿಗೆ ಎಣ್ಣೆ, ಮದ್ಯಗಳನ್ನು ಮಾರುತ್ತಿದ್ದರು.

ಗ್ರೀಸಿನ ಹಿತಕರವಾದ ಮತ್ತು ಅತ್ಯಂತ ಸ್ವಚ್ಛವಾದ ಹವೆ ಹಾಗೂ ಮನೋಹರವಾದ ಪ್ರಕೃತಿ ಸೌಂದರ್ಯ ಅಲ್ಲಿಯ ಜನರ

ಮನಸ್ಸಿನ ಮೇಲೆ ಅಪಾರ ಪ್ರಭಾವ ಬೀರಿದುವು. ಗ್ರೀಕ್ ಕಲಾವಿದರಲ್ಲಿ, ಸಾಹಿತಿಗಳಲ್ಲಿ ಮತ್ತು ತಾತ್ವಿಕರಲ್ಲಿ ದೃಷ್ಟಿ ವೈಶಾಲ್ಯ, ಸೌಂದರ್ಯಪ್ರಜ್ಞೆ ಮೂಡಿದವು. ಗ್ರೀಸಿನ ವಾಯುಗುಣ ಬಯಲು ಜೀವನಕ್ಕೆ ತುಂಬ ಅನುಕೂಲವಾಗಿದ್ದು, ಚಳಿಗಾಲದಲ್ಲಿಯೂ ಕೂಡ ಜನರು ನಿಸರ್ಗದ ಮಡಿಲಲ್ಲಿ ಹಾಯಾಗಿ ಜೀವಿಸುವದು ಸಾಧ್ಯವಾಗಿತ್ತು.

ಕಟ್ಟಡ ನಿರ್ಮಾಣಕ್ಕೆ ಮತ್ತು ಶಿಲ್ಪಕ್ಕೆ ಉಪಯೋಗವಾಗುವ ಶುದ್ಧವಾದ ಬಿಳಿ ಸಂಗಮರವರೀ ಕಲ್ಲು ಗ್ರೀಸಿನಲ್ಲಿ ಹೇರಳವಾಗಿ ದೊರೆಯುತ್ತಿತ್ತು. ಇದರಿಂದ ಗ್ರೀಕ್ ಶಿಲ್ಪ. ವಾಸ್ತುಶಿಲ್ಪಗಳ ಅಭಿವೃದ್ಧಿಗೆ ಸಹಾಯವಾಯಿತು.

ಗ್ರೀಕರ ಸ್ಥಾನಿಕ ಸ್ವಾತಂತ್ರ್ಯಾಭಿಲಾಷೆ, ಚಿಕ್ಕ ನಗರ-ರಾಜ್ಯಗಳ (City-States) ಉದಯ, ಜಲಪರ್ಯಟನ ಜೀವನ, ವಾಣಿಜ್ಯ ಮತ್ತು ವಸಾಹತುಗಾರಿಕೆಯ ಅನಿವಾರ್ಯತೆ, ಸಾಹಿತ್ಯ, ಕಲೆ ಮತ್ತು ತಾತ್ವಿಕ ಅಭಿವೃದ್ಧಿ, ಸಂಸ್ಕೃತಿ ವಿನಿಮಯ ಕಾರ್ಯದಲ್ಲಿ ಗ್ರೀಕರು ವಹಿಸಿದ ಪಾತ್ರ— ಇವೆಲ್ಲವುಗಳಲ್ಲಿಯೂ ಗ್ರೀಸಿನ ಭೌಗೋಲಿಕ ವೈಶಿಷ್ಟ್ಯಗಳ ಪ್ರಭಾವವನ್ನು ಕಾಣುತ್ತೇವೆ.

## ಗ್ರೀಕರ ಸಂಕ್ಷಿಪ್ತ ಇತಿಹಾಸ

ಕ್ರಿ. ಪೂ. ೨೦೦೦–೧೫೦೦ ರ ಕಾಲಾವಧಿಯಲ್ಲಿ ಕ್ಯಾಸ್ಪಿಯನ್ ಪ್ರದೇಶದಲ್ಲಿಯ ಇಂಡೋ–ಯುರೋಪಿಯನ್ನರ ಬುಡಕಟ್ಟಿಗೆ ಸೇರಿದ ಅಕೇಯಿಯನ್, ಡೋರಿಯನ್, ಅಯೋನಿ

ಯನ್ ಎಂಬ ಪಂಗಡಗಳು ಮೆಸಡೋನಿಯದ ಮೂಲಕ ಗ್ರೀಸಿಗೆ ನುಗ್ಗಿದರು; ಅಲ್ಲಿಯ ಫಲವತ್ತಾದ ಕೊಳ್ಳಗಳಲ್ಲಿ ನೆಲೆಸಿದರು. ಇವರು ಕ್ರಮೇಣ ಗ್ರೀಸ್, ಏಶಿಯ ಮೈನರ್ ಮತ್ತು ಈಜಿಯನ್ ದ್ವೀಪಗಳನ್ನು ಆಕ್ರಮಿಸಿದರು. (ಕ್ರಿ. ಪೂ. ೧೦೦೦). ಕ್ರಿ. ಪೂ. ೨೦೦೦ದ ಸುಮಾರಿಗೆ ಕ್ರೀಟ್ ಶ್ರೇಷ್ಠ ನಾಗರಿಕತೆಯ ನೆಲೆವೀಡಾಗಿತ್ತು. ಅನಾಗರಿಕ ಸ್ಥಿತಿಯಲ್ಲಿದ್ದ ಗ್ರೀಕರು ಕ್ರೀಟನ್ನರ ಉಚ್ಚ ನಾಗರಿಕತೆಯ ಅನೇಕ ಅಂಶಗಳನ್ನು ಅಳವಡಿಸಿಕೊಂಡರು. ಮತ್ತು ಆ ನಾಗರಿಕತೆಯ ನಾಶಕ್ಕೆ ಕಾರಣರಾದರು. ಟ್ರಾಯ್ ನಗರವನ್ನು ಗೆದ್ದುಕೊಂಡರು. ಡೋರಿಯನ್ನರು ಅಕೇಯಿಯನ್ನರನ್ನು ಪರಾಭವಗೊಳಿಸಿದರು. ಕ್ರಿ. ಪೂ. ೮ನೆಯ ಶತಕದ ಆರಂಭ ಕಾಲದಲ್ಲಿ ಗ್ರೀಕ್ ಜನಾಂಗದಲ್ಲಿ ಡೋರಿಯನ್ನರು, ಇಯೋಲಿಯನ್ನರು ಮತ್ತು ಅಯೋನಿಯನ್ನರು ಎಂಬ ಮುಖ್ಯವಾದ ಮೂರು ಪಂಗಡಗಳಿದ್ದುವು. ಕೋರಿಂಥ್, ಏಗೊಸ್, ಅಥೆನ್ಸ್, ಥೀಬ್ಸ್, ಇಫೆಸಸ್. ಮೈಲಿಟಸ್ ಎಂಬ ನಗರಗಳು ಗ್ರೀಕ್ ನಾಗರಿಕತೆಯ ಪ್ರಭಾವಶಾಲಿ ಕೇಂದ್ರಗಳಾಗಿದ್ದವು. ಕ್ರಿ. ಪೂ. ೭೫೦–೫೫೦ ಈ ಕಾಲಾವಧಿಯಲ್ಲಿ ಗ್ರೀಕರು ಕಪ್ಪು ಸಮುದ್ರ ತೀರಪ್ರದೇಶದಲ್ಲಿ ಅನೇಕ ನಗರಗಳನ್ನು ಕಟ್ಟಿದರು. ಮುಂದೆ ಇವರು ಉತ್ತರ ಆಫ್ರಿಕೆಯ ತೀರ ಪ್ರದೇಶ, ಇಟಲಿ, ಸಿಸಿಲಿ. ಸಾರ್ಡಿನಿಯಾ, ಕಾರ್ಸಿಕಾ ದ್ವೀಪ, ಫ್ರಾನ್ಸ್ ಮತ್ತು ಸ್ಪೇನಗಳಲ್ಲಿ ತಮ್ಮ ವಲಸೆಗಳನ್ನು ಸ್ಥಾಪಿಸಿದರು. ವಸಾಹತುಗಾರಿಕೆಯೊಂದಿಗೆ ಗ್ರೀಕರ ವಾಣಿಜ್ಯವೂ ವಿಸ್ತರಿಸಿತು.

ಹೆಲ್ಲೆನ್ ಎಂಬವನು ತಮ್ಮ ಮೂಲಪುರುಷನೆಂದು ತಿಳಿದಿದ್ದರಿಂದ ಅವರು ತಮ್ಮನ್ನು 'ಹೆಲನೀಸ್' ಎಂದೂ, ತಮ್ಮ

ದೇಶವನ್ನು "ಹೆಲ್ಲಾಸ್" ಎಂದೂ ಕರೆದರು. ಇಟಲಿಯ ನಿವಾಸಿಗಳು ಇವರನ್ನು ಗ್ರೀಕರೆಂದು ಕರೆದರು. ಗ್ರೀಕ್ ಭಾಷೆಯು ಸಂಸ್ಕೃತ ಮತ್ತು ಪರ್ಶಿಯನ್ ಭಾಷೆಗಳನ್ನು ಹೋಲುವಂತಿತ್ತು. ಗಾನಮಾಧುರ್ಯ ಗುಣವುಳ್ಳ ಮತ್ತು ತುಂಬ ಅಭಿವೃದ್ಧಿ ಹೊಂದಿದ ಗ್ರೀಕ್ ಭಾಷೆಯಲ್ಲಿ ಯಾವದೇ ಭಾವನೆಯನ್ನಾಗಲಿ, ವಿಚಾರವನ್ನಾಗಲಿ ಸಹಜವಾಗಿ ಮತ್ತು ಪರಿಣಾಮಕಾರಿಯಾಗಿ ನಿರೂಪಿಸಬಹುದಾಗಿತ್ತು.

ಗ್ರೀಕರ ಆರಂಭ ಕಾಲದ ಇತಿಹಾಸವನ್ನರಿಯಲು ಪ್ರಾಚ್ಯ ವಸ್ತು ಸಂಶೋಧಕರು ಶೋಧಿಸಿದ ಅವಶೇಷಗಳು ಮತ್ತು ಹೋಮರ ಮಹಾಕವಿಯ ಈಲಿಯಡ್ ಮತ್ತು ಒಡಿಸ್ಸೆ ಎಂಬ ಮಹಾಕಾವ್ಯಗಳು ಮುಖ್ಯ ಸಾಧನಗಳಾಗಿವೆ. ಕ್ರಿ. ಪೂ. ೭೦೦ ರ ವರೆಗಿನ ಕಾಲಕ್ಕೆ 'ಹೋಮರನ ಯುಗ'ವೆಂದು ಕರೆಯಲಾಗಿದೆ. ಹೋಮರನ ಕಾವ್ಯಗಳಲ್ಲಿ ಈ ಕಾಲದಲ್ಲಿ ಜರುಗಿದ ಕೆಲವು ಮಹತ್ವದ ಘಟನೆಗಳ ವರ್ಣನೆಯಿದೆ. ಟ್ರ್ರಾಜನ್‌ದ ರಾಜಕುಮಾರ ಪ್ಯಾರಿಸ್ ಎಂಬವನು ಸ್ಪಾರ್ಟಾ ದೊರೆಯ ಹೆಂಡತಿಯಾದ ಹೆಲೆನ್‌ಳನ್ನು ಅಪಹರಿಸಿಕೊಂಡು ಹೋದನು. ಆಗ ಗ್ರೀಸಿನ ದೊರೆಗಳೆಲ್ಲರೂ ಸೇರಿ ಒಂದು ಕೂಟವನ್ನು ಸಂಘಟಿಸಿ, ಏಶಿಯಾ ಮೈನರಿನಲ್ಲಿದ್ದ ಟ್ರಾಯ್ ನಗರಕ್ಕೆ ಮುತ್ತಿಗೆ ಹಾಕಿದರು; ಟ್ರಾಯ್ ನಗರವನ್ನು ಧ್ವಂಸಗೊಳಿಸಿದರು. ಈ ವಿಷಯ ಈಲಿಯಡ್ ಮಹಾಕಾವ್ಯದಲ್ಲಿ ಮುಖ್ಯ ಕಥಾವಸ್ತುವಾಗಿ ಬಂದಿದೆ. ಆ ಗ್ರೀಕ್ ದಂಡಯಾತ್ರೆಯ ನಂತರ ಒಡ್ಯೆಸಿಸ್ (ಅಥವಾ ಯುಲಿಸಿಸ್) ಎಂಬ ಗ್ರೀಕ್ ವೀರನು ಸ್ವದೇಶಕ್ಕೆ

ಮರಳುವಾಗ ಅನುಭವಿಸಿದ ಕಷ್ಟ ಮತ್ತು ಅವನು ಎಸಗಿದ ಸಾಹಸ ಕಾರ್ಯಗಳ ವರ್ಣನೆಯು ಒಡಿಸ್ಸಿ ಕಾವ್ಯದಲ್ಲಿದೆ. ಗ್ರೀಕ್ ಸಾಹಿತ್ಯ ಪ್ರಪಂಚದಲ್ಲಿಯೇ ಅತ್ಯಂತ ಶ್ಲಾಘನೀಯ ಕೃತಿಗಳೆಂದು ಹೆಸರಾಗಿರುವ ಹೋಮರನ ಈ ಕಾವ್ಯಗಳಲ್ಲಿ ಗ್ರೀಕರ ಕೃಷಿ ಜೀವನ, ನಗರಗಳು, ಹಿರಿಯರ ಮಂತ್ರಾಲೋಚಕ ಪರಿಷತ್ತು ಮತ್ತು ಜನತಾ ಸಭೆ ಇವುಗಳ ಬಗ್ಗೆ ಮಾಹಿತಿ ದೊರೆಯುತ್ತದೆ.

ಈಜಿಯನ್ನರ ಅಥವಾ ಕ್ರೀಟನ್ನರ ಸಾಗರಿಕತೆಯನ್ನು ಸ್ವೀಕರಿಸಿದ ಗ್ರೀಕರು ಹಿಟ್ಟೈಟರಿಂದ ಕಬ್ಬಿಣದ ಉಪಯೋಗವನ್ನು ಅರಿತುಕೊಂಡರು; ಫಿನಿಷಿಯನ್ನರಿಂದ ಬರವಣಿಗೆ ಮತ್ತು ವ್ಯಾಪಾರದ ಗತ್ತುಗಾರಿಕೆಯನ್ನು ಕಲಿತುಕೊಂಡರು; ಈಜಿಪ್ಷಿಯನ್ನರ ಕಲೆ, ಕೈಗಾರಿಕೆಗಳನ್ನು ಕರಗತಮಾಡಿಕೊಂಡರು. ಹೀಗೆ ಪರರಿಂದ ಎರವಲು ಪಡೆದ ಉತ್ತಮಾಂಶಗಳನ್ನು ಕ್ರಮಪಡಿಸಿ. ಉತ್ತಮಗೊಳಿಸಿ ಅದಕ್ಕೆಲ್ಲ ಗ್ರೀಕ್ ಶ್ರೇಷ್ಠತೆಯ ಮುದ್ರೆಯನ್ನೊತ್ತಿದರು ಈ ವಿಷಯದಲ್ಲಿ ಗ್ರೀಕರನ್ನು ಮೀರಿಸಿದವರಾರೂ ಇಲ್ಲ. ಈ ಮಹತ್ಸಾಧನೆಗೆ ಅವರ ಬಹುಮುಖ ಪ್ರತಿಭೆ. ಕಲ್ಪನಾ ಸಾಮರ್ಥ್ಯ. ದೃಷ್ಟಿ ವೈಶಾಲ್ಯತೆ ಮತ್ತು ಪರಿಪೂರ್ಣತೆಯ ಹಂಬಲಗಳೇ ಕಾರಣ.

## ನಗರ-ರಾಜ್ಯಗಳ ಉದಯ:

ಮೊದಮೊದಲು ಗ್ರೀಕರು ಫಲವತ್ತಾದ ಕೊಳ್ಳ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಭಾರತದಲ್ಲಿಯ ಆರ್ಯರಂತೆ ಇವರೂ ಪಶುಪಾಲನೆ ಮತ್ತು ಕೃಷಿ ಕಾರ್ಯಗಳಲ್ಲಿ ತೊಡಗಿದ್ದರು. ಕ್ರಮೇಣ ಪ್ರತಿಯೊಂದು ಕೊಳ್ಳ ಅಥವಾ ಬಯಲು ಪ್ರದೇಶದ ಜನರು

ರಾಜಕೀಯ ಸಂಘಟನೆ ಮಾಡಿಕೊಂಡಿದ್ದರಿಂದ ಪ್ರತಿಯೊಂದು ನಗರವು ಸ್ವತಂತ್ರ ನಗರ-ರಾಜ್ಯವಾಗಿ (City-State) ತಲೆಯೆತ್ತಿತು. ನಗರ-ರಾಜ್ಯದ ಮಧ್ಯದಲ್ಲಿಯ ಎತ್ತರ ಪ್ರದೇಶದಲ್ಲಿ (Acropolis) ರಾಜಧಾನಿ ಮತ್ತು ಕೋಟೆ ಇದ್ದವು. ಗ್ರೀಸಿನಲ್ಲಿ ಅಥೆನ್ಸ್ ನಗರ-ರಾಜ್ಯದ 'ಅಕ್ರೊಪೊಲಿಸ್' ಅತ್ಯಂತ ಪ್ರಸಿದ್ಧವಾಗಿತ್ತು.

ಪ್ರತಿಯೊಂದು ನಗರ-ರಾಜ್ಯಕ್ಕೆ ತನ್ನದೇ ಆದ ಅಧಿದೇವತೆ, ಸರಕಾರ, ಸಾರ್ವಭೌಮತ್ವ ಇದ್ದವು. ಅರ್ಗೋಸ್ ನಗರದಲ್ಲಿ ಹೀರಾದೇವಿ, ಅಪಲೋನಿಯದಲ್ಲಿ ಅಪೊಲ್ಲೋ, ಅಥೆನ್ಸಿನಲ್ಲಿ ಅಥೇನಾ ದೇವಿ ರಕ್ಷಕ ದೇವತೆಗಳಾಗಿದ್ದರು. ಕೋಟೆಯ ಸಮೀಪದಲ್ಲಿಯೇ ಪೇಟೆ, ನ್ಯಾಯಾಲಯ, ದೇವಾಲಯ ಮತ್ತು ನಾಗರಿಕರ ಮನೆಗಳಿದ್ದವು. ಗ್ರೀಕರು ತಮ್ಮ ನಗರ-ರಾಜ್ಯಗಳಲ್ಲಿಯೇ ರಾಜಕೀಯ, ಧಾರ್ಮಿಕ ಮತ್ತು ಬೌದ್ಧಿಕ ಜೀವನವನ್ನು ಮೇಲುಗೊಳಿಸಲು ಯತ್ನಿಸಿದರು. ಗ್ರೀಕ್ ಪ್ರಜೆಗಳಿಗೆ ತಮ್ಮ ರಾಜ್ಯವೇ ಪಂಚಪ್ರಾಣವಾಗಿತ್ತು. ತಮ್ಮ ರಾಜ್ಯದಿಂದ ಹೊರತಳ್ಳಲ್ಪಡುವುದೆಂದರೆ ಸಾವಿಗಿಂತಲೂ ಕೇಡಾದುದೆಂದು ತಿಳಿಯುತ್ತಿದ್ದರು. ತಮ್ಮ ರಾಜ್ಯದ (Polis) ಸ್ವಾತಂತ್ರ್ಯ ರಕ್ಷಣೆಗಾಗಿ ಅತ್ಯಾನಂದದಿಂದ ಪ್ರಾಣ ನೀಗುತ್ತಿದ್ದರು. ಇದಕ್ಕಿಂತಲೂ ಮಿಗಿಲಾಗಿ, ಅವರು ತಮ್ಮ ರಾಜ್ಯದ ಅಭ್ಯುದಯಕ್ಕಾಗಿ ಕಾಯಾ-ವಾಚಾ-ಮನಸಾ ದುಡಿದರು. ಗ್ರೀಕರು ಸಮಾಜ ಮತ್ತು ರಾಜ್ಯ ಇವುಗಳಲ್ಲಿ ಬೇಧ ಕಲ್ಪಿಸಲಿಲ್ಲ.

ನೂರ ಐವತ್ತಕ್ಕೂ ಮಿಕ್ಕಿದ ಗ್ರೀಕರ ಸ್ವತಂತ್ರ ಹಾಗೂ ಚಿಕ್ಕ ನಗರ ರಾಜ್ಯಗಳು ಜಾಗತಿಕ ಇತಿಹಾಸದಲ್ಲಿಯೇ ಅಪೂರ್ವವಾದವುಗಳು. ಗ್ರೀಕರು ಅಖಂಡ ಸಾಮ್ರಾಜ್ಯ ಕಟ್ಟದಿರುವುದಕ್ಕೆ ಆ ದೇಶದ ಭೌಗೋಲಿಕ ಅನೈಕ್ಯತೆಯೇ ಕಾರಣ. ಬೆಟ್ಟಗಳಿಂದ ಬೇರ್ಪಡಿಸಲ್ಪಟ್ಟ ನಗರ-ರಾಜ್ಯಗಳಲ್ಲಿಯ ಪ್ರಜೆಗಳು ತೀರ ಸಂಕುಚಿತವಾದ, ಅತ್ಯಂತ ಆಳವಾದ ಸ್ಥಾನಿಕ ಪ್ರೇಮ ಹಾಗೂ ಸ್ವಾತಂತ್ರ್ಯಾಭಿಲಾಷೆಯನ್ನು ಬೆಳೆಸಿಕೊಂಡರು. ಗ್ರೀಕರ ರಾಜ್ಯಪ್ರೇಮ, ನಿಷ್ಠೆಗಳನ್ನು ಸರಿಗಟ್ಟುವ ಉದಾಹರಣೆಗಳು ಇತರ ಪ್ರಾಚೀನ ಜನಾಂಗಗಳಲ್ಲಿ ಇಲ್ಲವೆಂದು ಹೇಳಬಹುದು. ಇಂತಹ ಸಂಕುಚಿತವಾದ ಪ್ರಾದೇಶಿಕ ಪ್ರೇಮ ಭಾವನೆಯು ಗ್ರೀಕರ ಐಕ್ಯತೆಗೆ ಕುಠಾರಪ್ರಾಯವಾಯಿತೆಂಬುದು ಗಮನಾರ್ಹವಾದ ಸಂಗತಿ. ನಗರ-ರಾಜ್ಯಗಳಲ್ಲಿ ಪೈಪೋಟಿ, ಕಲಹಗಳೇರ್ಪಟ್ಟು ಆಗಾಗ ಕದನಗಳು ಜರುಗುತ್ತಿದ್ದವು. ಅಥೆನ್ಸ್ ಮತ್ತು ಸ್ಪಾರ್ಟಾ ರಾಜ್ಯಗಳ ನಡುವೆ ಜರುಗಿದ ದೀರ್ಘಾವಧಿಯ (ಕ್ರಿ. ಪೂ ೪೩೧- ೪೦೪) ಯುದ್ಧ ಗ್ರೀಕರ ರಾಜಕೀಯ ಶಕ್ತಿಯನ್ನೇ ಹ್ರಾಸಗೊಳಿಸಿತು.

ಗ್ರೀಕರಲ್ಲಿ ರಾಜಕೀಯ ಐಕ್ಯತೆಯಿರಲಿಲ್ಲವಾದರು, ಅವರಲ್ಲಿದ್ದ ಒಂದೇ ರೀತಿಯ ಧರ್ಮ, ಕುಲಾಭಿಮಾನ, ಭಾಷೆ, ಧಾರ್ಮಿಕ ಉತ್ಸವಗಳು, ಓಲಿಂಪಿಕ್ ಕ್ರೀಡಾಸ್ಪರ್ಧೆ, ಇತಿಹಾಸ ಮತ್ತು ಸಾಹಿತ್ಯ ಕೃತಿಗಳಲ್ಲಿ ಆದರಾಭಿಮಾನ - ಇವೆಲ್ಲವೂ ಸಾಂಸ್ಕೃತಿಕ ಐಕ್ಯತೆಯ ಪೋಷಕಾಂಶಗಳಾಗಿದ್ದುವು. ಬೆಟ್ಟಗಳು ಗ್ರೀಕರನ್ನು ಬೇರ್ಪಡಿಸಿದ್ದರೆ, ಸಮುದ್ರ ಅವರನ್ನೆಲ್ಲ ಸಮೀಪಕ್ಕೆ ತಂದಿತ್ತು.

ಕ್ರಿ. ಪೂ. ೪೯೦ ರಲ್ಲಿ ಪರ್ಶಿಯನ್ನರು ಗ್ರೀಸಿನ ಮೇಲೆ ದಾಳಿಯಿಟ್ಟಾಗ, ಗ್ರೀಕ್ ರಾಜ್ಯಗಳು ತಮ್ಮ ಭೇದಭಾವಗಳನ್ನು ಮರೆತು, ಒಂದಾಗಿ ವೈರಿಯನ್ನು ಎದುರಿಸಿದವು.

**ರಾಜಕೀಯ ಜೀವನ :**

ಮೊದಲು ಎಲ್ಲ ನಗರ-ರಾಜ್ಯಗಳಲ್ಲಿ ರಾಜಪ್ರಭುತ್ವ ಏರ್ಪಟ್ಟಿತ್ತು. ಆ ಚಿಕ್ಕ ರಾಜ್ಯಗಳಲ್ಲಿ ದೊರೆಗಳ ದೋಷಗಳು ಸುಲಭವಾಗಿ ಎಲ್ಲ ಪ್ರಜೆಗಳಿಗೆ ತಿಳಿಯುತ್ತಿದ್ದವು. ಪೌರ್ವಾತ್ಯ ದೇಶಗಳಲ್ಲಿಯ ಅರಸರಿಗಿದ್ದ ಪ್ರಭಾವ, ದರ್ಪ ಮತ್ತು ಅಧಿಕಾರದ ಅಂತಸ್ತು ಗ್ರೀಕ್ ದೊರೆಗಳಿಗಿರಲಿಲ್ಲ. ಕ್ರಿ. ಪೂ ೮ ನೆಯ ಶತಮಾನದ ಮಧ್ಯಭಾಗದ ಸುಮಾರಿಗೆ ಸ್ಪಾರ್ಟಾವೊಂದನ್ನುಳಿದು ಎಲ್ಲ ಗ್ರೀಕ್ ನಗರ-ರಾಜ್ಯಗಳಲ್ಲಿ ರಾಜಪ್ರಭುತ್ವ ಕೊನೆಗೊಂಡಿತು. ಪ್ರಭಾವಶಾಲಿಗಳಾಗುತ್ತ ಬಂದಿದ್ದ ಶ್ರೀಮಂತರು ಅಧಿಕಾರಗ್ರಹಣ ಮಾಡಿದರು. ಶ್ರೀಮಂತರ ಆಳಿಕೆಯಲ್ಲಿ (ಕ್ರಿ. ಪೂ. ೭೫೦-೬೫೦) ಕಾನೂನುಗಳ ಕ್ರೋಢೀಕರಣ, ವಸಾಹತುಗಾರಿಕೆ, ವಾಣಿಜ್ಯ ಹಾಗೂ ಸಾಂಸ್ಕೃತಿಕ ಅಭಿವೃದ್ಧಿ ಸಾಧಿಸಲ್ಪಟ್ಟಿತು. ಬರಬರುತ್ತ ಶ್ರೀಮಂತರು (Aristocrats) ಸ್ವಾರ್ಥಲಾಲಸೆಯಿಂದ ಪ್ರೇರಿತರಾಗಿ ಅಧಿಕಾರದ ದುರುಪಯೋಗ ಮಾಡಿದರು; ಬಡವರ ಶೋಷಣೆ ನಡೆಸಿದರು. ಇಂತಹ ಆಳಿಕೆಯನ್ನು ಸಾಮಾನ್ಯ ಜನರ ಧುರೀಣರು ಕೊನೆಗಾಣಿಸಿದರು. ಕ್ರಿ. ಪೂ ೬೦೦-೫೦೦ ರ ಅವಧಿಯಲ್ಲಿ ಎಲ್ಲ ಗ್ರೀಕ್ ರಾಜ್ಯಗಳಲ್ಲಿ ಟೈರಂಟರು ಅಥವಾ ನಿರಂಕುಶಾಧಿಕಾರಿಗಳು ರಾಜ್ಯಸೂತ್ರಗಳನ್ನು ವಹಿಸಿದ್ದರು. ಪ್ರಾಚೀನ ಗ್ರೀಸಿನಲ್ಲಿ 'ಟೈರಂಟ್'

ಈ ಶಬ್ದಕ್ಕೆ 'ಪ್ರಜಾಪೀಡಕ ದೊರೆ' ಎಂಬ ಈಗಿರುವ ಅರ್ಥವಿರಲಿಲ್ಲ. ಅವನು ರಾಜ್ಯಾಂಗ ಸಮ್ಮತಿಯಿಲ್ಲದೆ ಅಧಿಕಾರ ಚಲಾಯಿಸುವವನು ಎಂಬ ಅರ್ಥವಿತ್ತು. ಅಂಥವನ ಆಳಿಕೆಯೇ 'ಟಿರನಿ'. ಸ್ಪಾರ್ಟಾದಲ್ಲಿ ಮಾತ್ರ 'ಟಿರನಿ' ಜಾರಿಗೆ ಬರಲಿಲ್ಲ: ಅಲ್ಲಿ ಮೊದಲಿದ್ದ ಕೆಲವರ ಪ್ರಭುತ್ವ (Oligarchy) ಮುಂದುವರಿಯಿತು.

ಟೈರಂಟರು ಕುತಂತ್ರದಿಂದ ಇಲ್ಲವೆ ಬಲಪ್ರಯೋಗದಿಂದ ಅಧಿಕಾರಗ್ರಹಣ ಮಾಡಿದ್ದರೂ, ಅವರು ಜನಹಿತ ಸಾಧನೆಗಾಗಿ ಪರಿಶ್ರಮಿಸಿದರು; ಪರಕೀಯರ ದಾಳಿಗಳಿಂದ ತಮ್ಮ ರಾಜ್ಯಗಳನ್ನು ಸಂರಕ್ಷಿಸಿದರು; ವಸಾಹತುಗಾರಿಕೆ, ವಾಣಿಜ್ಯ ಮತ್ತು ಸಾಹಿತ್ಯ ಸೃಷ್ಟಿಗೆ ಉತ್ತೇಜನವಿತ್ತರು. ಮೈಲಿಟಸಿನ ಥ್ರೇಸಿಬುಲಸ್, ಸಿರಾಕ್ಯೂಸಿನ ಗೆಲನ್, ಕೋರಿಂಥದ ಪೆರಿಯಾಂಡರ್. ಅಥೆನ್ಸಿನ ಪಿಸಿಸ್ಟ್ರೇಟಸ್ ಮುಂತಾದವರು ಒಳ್ಳೆಯ ಆಡಳಿತಗಾರರಾಗಿದ್ದರು. ಪಿಸಿಸ್ಟ್ರೇಟಸನು (ಕ್ರಿ. ಪೂ ೫೪೦-೫೨೮) ಸೈನ್ಯದ ಬೆಂಬಲ ಪಡೆದು ಅಥೆನ್ಸ ರಾಜ್ಯದ ಅಧಿಕಾರಸೂತ್ರಗಳನ್ನು ಹಿಡಿದುಕೊಂಡಿದ್ದನು. ಈತನು ಜನಹಿತ ಸಾಧಿಸಿದನು; ಬಲಾಢ್ಯವಾದ ಹಡಗುಪಡೆ ಕಟ್ಟಿದನು; ಆಥೆನ್ಸ್‌ನಲ್ಲಿ ಸಾರ್ವಜನಿಕ ಸೌಧಗಳನ್ನು ನಿರ್ಮಿಸಿದನು, ಮತ್ತು ವಾಣಿಜ್ಯ ಕಾರ್ಯಗಳಿಗೆ ಉತ್ತೇಜನವಿತ್ತನು. ಆಥೆನ್ಸಿನ ಇನ್ನೊಬ್ಬ ಪ್ರಸಿದ್ಧ ಟೈರಂಟನಾದ ಕ್ಲೀಸ್ಥಿನೀಸ್ ಕ್ರಿ. ಪೂ ೫೦೯ ರಲ್ಲಿ ಅಧಿಕಾರಕ್ಕೆ ಬಂದನು. ಇವರು ಕುಲ-ಪಂಗಡಗಳಲ್ಲಿ ಬಹುಕಾಲದಿಂದ ಇದ್ದ ಹೋರಾಟವನ್ನು ತಪ್ಪಿಸಿದನು. "ಆಸ್ಟ್ರಸಿಸಂ" (Ostracism) ಅಥವಾ

"ಗಡಿಪಾರುಗೊಳಿಸುವಿಕೆ" ಪದ್ಧತಿಯನ್ನು ಆರಂಭಿಸಿದನು. ಇದರ ಪ್ರಕಾರ, ಅಥೆನ್ಸಿನ ನಾಗರಿಕರು ತಮ್ಮ ರಾಜ್ಯಕ್ಕೆ ಗಂಡಾಂತರಕಾರಿಯಾದ ಯಾವುದೇ ಪ್ರಮುಖ ವ್ಯಕ್ತಿಯನ್ನು ಮತದಾನ ಮೂಲಕ ಹತ್ತು ವರ್ಷಗಳ ವರೆಗೆ ಗಡಿಪಾರು ಮಾಡಲು ಬರುವಂತಿತ್ತು.

ಕ್ರಿ. ಪೂ. ೬ ನೇ ಶತಮಾನದಲ್ಲಿ ಗ್ರೀಕ್ ನಾಗರಿಕತೆ ಸತ್ವಶಾಲಿಯಾಗಲಾರಂಭಿಸಿತು. ರಾಜಕೀಯ ಮುತ್ಸದ್ದಿತನ, ಶಿಲ್ಪ, ಸಾಹಿತ್ಯ ಮತ್ತು ಧಾರ್ಮಿಕ ಜೀವನದಲ್ಲಿ, ಗಮನಾರ್ಹವಾದ ವಿಕಾಸ ಉಂಟಾಯಿತು. ಗ್ರೀಕ್ ಸತ್ಯಾನ್ವೇಷಿಗಳು ಮಾನವ ಜೀವನ ಹಾಗೂ ವಿಶ್ವದ ನೈಜಸ್ವರೂಪವನ್ನರಿಯಲು ಪ್ರಾಮಾಣಿಕ ಯತ್ನ ನಡೆಸಿದರು. ಕ್ರಿ. ಪೂ. ಐದನೆಯ ಶತಕವು ಗ್ರೀಕ್ ಇತಿಹಾಸದಲ್ಲಿಯೇ ಅತ್ಯಂತ ವೈಭವದ ಕಾಲ. ಗ್ರೀಕರು ತಮ್ಮ ಮೇಲೆ ಎರಗಿದ ಬಲಾಢ್ಯವಾದ ಪರ್ಶಿಯನ್ ಚಕ್ರಾಧಿಪತ್ಯವನ್ನು ಒಕ್ಕಟ್ಟಿನಿಂದ ಎದುರಿಸಿ, ಗ್ರೀಕ್ ಸ್ವಾತಂತ್ರ್ಯವನ್ನು ರಕ್ಷಿಸಿದರು. ಈ ಅಮೋಘ ವಿಜಯದಿಂದಾಗಿ ಗ್ರೀಕರಲ್ಲಿ, ಅದರಲ್ಲಿಯೂ ವಿಶೇಷವಾಗಿ ಅಥೆನ್ಸಿನವರಲ್ಲಿ, ಅದ್ಭುತ ಶಕ್ತಿ ಮತ್ತು ಸ್ಫೂರ್ತಿ ಸಂಚರಿಸಿತು. ಪೆರಿಕ್ಲೀಸ್ ಎಂಬ ಮುತ್ಸದ್ದಿ ಆಡಳಿತಗಾರನ ಸಮರ್ಥ ನೇತೃತ್ವದಲ್ಲಿ ಅಥೆನ್ಸ್ ಜೀವನದ ಎಲ್ಲ ರಂಗಗಳಲ್ಲಿಯೂ ಅತ್ಯದ್ಭುತ ಪ್ರಗತಿ ಸಾಧಿಸಿ, ಇಡೀ **'ಗ್ರೀಸಿನ ಶಾಲೆ'**ಯಾಗಿ ಮೆರೆಯಿತು.

ಗ್ರೀಕರು ಕ್ರಿ. ಪೂ. ೪೯೦ ರಲ್ಲಿ ಮ್ಯಾರಥಾನ್ ಎಂಬಲ್ಲಿ ಪರ್ಶಿಯನ್ನರನ್ನು ಪರಾಭವಗೊಳಿಸಿದ ಘಟನೆಯು ಜಾಗತಿಕ

ಇತಿಹಾಸದಲ್ಲಿಯೇ ಒಂದು ಮಹತ್ವದ ಮೈಲುಗಲ್ಲಾಗಿದೆ. "ಈ ಯುದ್ಧದಲ್ಲಿ ಗ್ರೀಕರಿಗೆ ಅಪಜಯವಾಗಿದ್ದ ಪಕ್ಷದಲ್ಲಿ, ಮಾನವ ಕುಲದ ಸಂಸ್ಕೃತಿಕ ಅಭಿವೃದ್ಧಿಯ ದಿಸೆಯೇ ಬದಲಾಗುತ್ತಿತ್ತು" ಎಂಬುದಾಗಿ ಪ್ರೊಫೆಸರ್ ಹರ್ನ ಶಾ ಅಭಿಪ್ರಾಯಪಟ್ಟಿದ್ದಾರೆ. ಗ್ರೀಕರ ಈ ಮಹತ್ವದ ವಿಜಯಕ್ಕೆ ಮಿಲ್ಟಿಏಡಸನ ಅಪ್ರತಿಮ ಧೈರ್ಯ ಮತ್ತು ಕಾಲಿಮ್ಯಾಕಸ್‌ನ ಚಾತುರ್ಯಗಳೇ ಕಾರಣ. ಈ ವಿಜಯದಿಂದಾಗಿ ಗ್ರೀಕ್ ಸಂಸ್ಕೃತಿ ಉಳಿದು, ಬಹುಮುಖವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಯಿತಲ್ಲದೆ. ದಿವ್ಯ ಗ್ರೀಕ್ ಸಂಸ್ಕೃತಿಯು ಯುರೋಪಿಯನ್ ನಾಗರಿಕತೆಯ ಬುನಾದಿಯಾಗಿ ನಿಲ್ಲುವುದು ನಿಶ್ಚಿತವಾಯಿತು. ಪ್ಲಟಿಯ (ಕ್ರಿ. ಪೂ. ೪೮೦) ಮತ್ತು ಮೈಕಲೆ (ಕ್ರಿ. ಪೂ. ೪೭೯) ಯುದ್ಧಗಳಲ್ಲಿಯೂ ಗ್ರೀಕರು ಪರ್ಶಿಯನ್ನರನ್ನು ಪರಾಭವಗೊಳಿಸಿದರು. ಈ ಗ್ರೀಕ್ ವಿಜಯವನ್ನು ಕುರಿತು ಪ್ರೊ. ಬ್ಯೂರಿ ಹೀಗೆ ಉದ್ಗಾರ ತೆಗೆದಿದ್ದಾರೆ:-- "ಆ ಸುದಿನದಂದು (ವಿಜಯದ ದಿನ) ದೇವತೆಗಳು 'ಗ್ರೀಕರೇ ಮುನ್ನಡೆಯಿರಿ ಮತ್ತು ಭಾಗ್ಯಶಾಲಿಗಳಾಗಿರಿ' ಎಂದು ಆಶೀರ್ವದಿಸಿರಬೇಕು !"

## ಸುವರ್ಣಯುಗ

ಪ್ರಾಚೀನ ಗ್ರೀಸಿನ ಇತಿಹಾಸದಲ್ಲಿ ಕ್ರಿ. ಪೂ. ೫ ನೆಯ ಶತಮಾನವು 'ಸುವರ್ಣಯುಗ' ಎಂದು ಹೆಸರಾಗಿದೆ. ಗ್ರೀಕ್ ಸಂಸ್ಕೃತಿಯ ವೈಭವಕ್ಕೆ ಅಥೆನ್ಸ್ ನಗರ-ರಾಜ್ಯ ಬಹುಮಟ್ಟಿಗೆ ಕಾರಣವಾಯಿತು. ಪರ್ಶಿಯದ ಮೇಲೆ ಸಾಧಿಸಿದ ಮಹಾ ವಿಜಯವು ಅಥೆನ್ಸಿನ ನಾಗರಿಕರಲ್ಲಿ ಅಮಿತೋತ್ಸಾಹವನ್ನು, ನವ

ಚೈತನ್ಯವನ್ನು ತುಂಬಿತು. ಆಗ ಪ್ರತಿಯೊಬ್ಬ ಪೌರನು ತನ್ನ ರಾಜದ ಅಭ್ಯುದಯಕ್ಕಾಗಿ ದುಡಿಯಲು ಉತ್ಸುಕತೆಯನ್ನು ತೋರಿಸಿದನು. ಪರ್ಶಿಯನ್ನರ ದಾಳಿಗೀಡಾಗಿ ಭಗ್ನವಾಗಿದ್ದ ಅಥೆನ್ಸ್ ನಗರದ ಪುನರ್-ನಿರ್ಮಾಣಕ್ಕಾಗಿ ಧನ ಸಹಾಯ ಸಲ್ಲಿಸಲು ಪ್ರತಿಯೊಬ್ಬ ಪ್ರಜೆ ಆತುರನಾಗಿದ್ದನು. ಈ ಕಾಲದಲ್ಲಿ ಅಥೆನ್ಸ್ ಈಜಿಯನ್ ಸಮುದ್ರ ಪ್ರದೇಶದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿತ್ತು. ಅಥೆನ್ಸ್ ಸಾಮ್ರಾಜ್ಯದ ವಾಣಿಜ್ಯ ವಿಸ್ತರಿಸಿದ್ದರಿಂದ ಆರ್ಥಿಕ ಸ್ಥಿತಿಯೂ ತೃಪ್ತಿಕರವಾಗಿತ್ತು.

ಸೇನಾನಾಯಕ ಹುದ್ದೆಗೆ ಚುನಾಯಿತನಾಗಿದ್ದ ಪೆರಿಕ್ಲೀಸ್ ಮೂವತ್ತು ವರ್ಷಗಳ ಕಾಲ ಅಥೆನ್ಸಿನ ಪ್ರಜಾಸತ್ತೆಯ ಚೌಕಟ್ಟಿನಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಅಧಿಕಾರ ಚಲಾಯಿಸಿದನು. ಈತನ ಆಳಿಕೆಯಲ್ಲಿ ಅಥೆನ್ಸಿನ ಪ್ರತ್ಯಕ್ಷ ಪ್ರಜಾಪ್ರಭುತ್ವ ಪರಿಪಕ್ವಗೊಂಡಿತು. ಪೆರಿಕ್ಲೀಸನು ನಾಗರಿಕರ ರಾಜಕೀಯ ಆಶೋತ್ತರಗಳನ್ನು ಪೂರೈಸುವ ಉದ್ದೇಶದಿಂದ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಆರ್ಕನ್ (ಮುಖ್ಯಾಧಿಕಾರಿಗಳ) ಹುದ್ದೆಗಳು ಎಲ್ಲ ವರ್ಗಗಳ ಜನರಿಗೆ ಲಭಿಸುವ ಅವಕಾಶ ಕಲ್ಪಿಸಿದನು. ಐದು ನೂರು ಸದಸ್ಯರ ಪರಿಷತ್ತಿನ ಹಾಗೂ ಜನತಾ ನ್ಯಾಯಾಲಯಗಳ ಅಧಿಕಾರಗಳನ್ನು ಹೆಚ್ಚಿಸಿದನು. ಸರಕಾರವು ನಾಗರಿಕ ಪಂಚರಿಗೆ (citizen - jurors) ಸಂಭಾವನೆ ಕೊಡುವ ಪದ್ಧತಿಯನ್ನು ಆರಂಭಿಸಿದನು. ಪೆರಿಕ್ಲೀಸನ ಸುಧಾರಣೆಗಳಿಂದಾಗಿ ಅಥೆನ್ಸಿನ ಸಮಾಜದಲ್ಲಿ ಸರ್ವರಿಗೂ ನ್ಯಾಯ, ಅರ್ಹತೆಗೆ ತಕ್ಕ ಪುರಸ್ಕಾರ, ವ್ಯಕ್ತಿ ಸ್ವಾತಂತ್ರ್ಯ ಮತ್ತು ಕಾನೂನಿಗೆ ನಿಷ್ಠೆ ಲಭಿಸಿದುವು.

ಪೆರಿಕ್ಲೀಸನು ಅಥೆನ್ಸ್ ನಗರಿಯನ್ನು ಸುಂದರಗೊಳಿಸಿದನು. ಇಕ್ಟಿನಸ್ ಎಂಬ ವಾಸ್ತುಶಿಲ್ಪಿ ಆಕ್ರೊಪೊಲಿಸಿನ ಮೇಲೆ ಅಥೆನಾ ದೇವಿಗಾಗಿ ಪಾರ್ಥೆನಾನ್ ಎಂಬ ಬಹು ಸುಂದರವಾದ ದೇವಾಲಯವನ್ನು ನಿರ್ಮಿಸಿದನು. ಅಲ್ಲಿಯ ಭವ್ಯವಾದ ಅಥೆನಾ ದೇವಿಯ ಪ್ರತಿಮೆಯನ್ನು ತಯಾರಿಸಿದನು ವರಶಿಲ್ಪಿ ಫಿಡಿಯಸ್. ಪೆರಿಕ್ಲೀಸನ ಉದಾರ ಆಶ್ರಯದಲ್ಲಿ ಕಲೆ, ಶಿಲ್ಪ. ವಾಸ್ತುಶಿಲ್ಪಗಳು ಅಪಾರವಾಗಿ ಅಭಿವೃದ್ಧಿ ಹೊಂದಿದವು. ಈತನು ಅಥೆನ್ಸಿನ ಬೌದ್ಧಿಕ ಉನ್ನತಿಗೂ ಕಾರಣನಾದನು; ಖ್ಯಾತ ವಿಜ್ಞಾನಿಗಳಿಗೆ, ಕಲಾವಿದರಿಗೆ, ನಾಟಕಕಾರರಿಗೆ, ಪಂಡಿತರಿಗೆ ಉತ್ತೇಜನ ಕೊಟ್ಟನು. ಈ ಯುಗದಲ್ಲಿ ಗ್ರೀಕ್ ನಾಟಕ ಅಮೋಘ ಸಿದ್ಧಿ ಪಡೆಯಿತು. ಮಹಾ ನಾಟಕಕಾರರಾದ ಈಸ್ಕಿಲಸ್. ಸಾಫೋಕ್ಲೀಸ್ ಮತ್ತು ಯುರಿಪಿಡಿಸ್ ರಚಿಸಿದ ದುಃಖಾಂತ ನಾಟಕಗಳು, ಅರಿಸ್ಟೋಫೇನಸ್‌ನ ಸುಖಾಂತ ನಾಟಕಗಳು ಇಂದಿಗೂ ಸುಪ್ರಸಿದ್ಧವಾಗಿವೆ. ಪೆರಿಕ್ಲೀಸನ ಕಾಲವು ಗ್ರೀಕ್ ಸಾಹಿತ್ಯದ ಸುವರ್ಣಯುಗವಾಗಿತ್ತು.

ಇತಿಹಾಸ ಜನಕನೆನಿಸಿದ ಹಿರೊಡೊಟಸ್, ಶ್ರೇಷ್ಠ ಚರಿತ್ರಕಾರನಾದ ಥ್ಯೂಸಿಡೈಡಸ್, ಗ್ರೀಕ್ ವೈದ್ಯಶಾಸ್ತ್ರದ ಜನಕನೆಂದು ಹೆಸರಾಗಿರುವ ಹಿಪ್ಪೊಕ್ರೇಟಿಸ್, ಜಗದ್ವಿಖ್ಯಾತ ತತ್ತ್ವಜ್ಞಾನಿ ಸಾಕ್ರೆಟೀಸ್ ಇವರೆಲ್ಲರೂ ಪೆರಿಕ್ಲೀಸನ ಸುವರ್ಣಯುಗದಲ್ಲಿ ಬಾಳಿದ ಮಹನೀಯರು. ಏಕಕಾಲದಲ್ಲಿ, ಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ಇಂತಹ ಅಪ್ರತಿಮ ಪರಿಣತರು ಜನಿಸುವುದು ತೀರ ವಿರಳ.

**ಪೆಲಪೊನೆಸಿಯನ್ ಯುದ್ಧ**: ಪರಕೀಯರ ನೌಕಾದಾಳಿಗಳಿಂದ ರಕ್ಷಿಸಿಕೊಳ್ಳುವದಕ್ಕಾಗಿ ಗ್ರೀಕ್ ರಾಜ್ಯಗಳು 'ಡೇಲಿಯನ್ ಲೀಗ್' ಎನ್ನುವ ಕೂಟವನ್ನು ಸ್ಥಾಪಿಸಿದ್ದವು. ಅಥೆನ್ಸ್ ಆ ಕೂಟದ ನೇತೃತ್ವ ವಹಿಸಿತ್ತು. ಹೀಗಾಗಿ ಅಥೆನ್ಸ್ ಗ್ರೀಸಿನಲ್ಲಿಯೇ ಅತ್ಯಂತ ಪ್ರಭಾವಶಾಲಿ ಮತ್ತು ವೈಭವಶಾಲಿಯಾದ ರಾಜ್ಯವಾಗಿ ಮೆರೆಯಲಾರಂಭಿಸಿತು. ಅಥೆನ್ಸಿನ ಪ್ರತಿಸ್ಪರ್ಧಿಯಾಗಿದ್ದ ಸ್ಪಾರ್ಟಾ ರಾಜ್ಯವು ಅಥೆನ್ಸಿನ ಸಂಪತ್ತು, ವೈಭವ, ಅಧಿಕಾರ ಪ್ರಾಬಲ್ಯಗಳನ್ನು ಕಂಡು ಸಹಿಸಲಾರದೆ ಅಥೆನ್ಸಿನ ಮೇಲೆ ಯುದ್ಧ ಸಾರಿತು. ದೀರ್ಘಕಾಲದ ವರೆಗೆ [ಕ್ರಿ. ಪೂ. ೪೩೧–೪೦೪] ಅಥೆನ್ಸ ಮತ್ತು ಸ್ಪಾರ್ಟಾಗಳ ನಡುವೆ ಜರುಗಿದ ಯುದ್ಧಕ್ಕೆ "ಪೆಲಿಪೊನೇಸಿಯನ್ ಯುದ್ಧ" ಎಂದು ಹೆಸರು. ಭೂಕದನಲ್ಲಿ ಅಥೆನ್ಸಿನವರು ತಮ್ಮ ವೈರಿಗಳಾದ ಸ್ಪಾರ್ಟಾದವರನ್ನು ಸೋಲಿಸುವ ಸ್ಥಿತಿಯಲ್ಲಿರಲಿಲ್ಲ. ಇದಲ್ಲದೆ, ಭೀಷಣವಾದ ಪ್ಲೇಗಿನ ಹಾವಳಿಗೆ ತುತ್ತಾಗಿ ಅನೇಕ ಅಥೇನಿಯನ್ನರು ಪ್ರಾಣ ನೀಗಿದರು; ಜನರ ಸ್ಥೈರ್ಯವೂ ಸಡಿಲಾಯಿತು. ಕ್ರಿ. ಪೂ. ೪೨೯ ರಲ್ಲಿ ಪೆರಿಕ್ಲೀಸ್ ಪ್ಲೇಗಿಗೆ ಬಲಿಯಾದನು. ತರುವಾಯ ಅಧಿಕಾರಕ್ಕೆ ಬಂದ ರಾಜಕಾರಣಿಗಳು ಆತನ ಯೋಗ್ಯತೆ ಪಡೆದಿರಲಿಲ್ಲ. ಅವರು ಪೆರಿಕ್ಲೀಸನು ಅನುಸರಿಸಿದ ಯುದ್ಧ ನೀತಿಯನ್ನು ಕೈಬಿಟ್ಟರು. ಗ್ರೀಕರ ಅಂತಃಕಲಹದ ಲಾಭ ಪಡೆದು, **ಪರ್ಶಿಯಾ ದೇಶವು** ಅಥೆನ್ಸಿನ ವಿರುದ್ಧವಾಗಿ ಸ್ಪಾರ್ಟಾಕ್ಕೆ ಸಹಾಯ ಮಾಡಿತು. ಕ್ರಿ. ಪೂ. ೪೦೪ ರಲ್ಲಿ ಜರುಗಿದ ಎಗಸ್ಪಟಮಿ ಕದನದಲ್ಲಿ ಅಥೆನ್ಸ್ ಪರಾಭವ ಹೊಂದಿತು. ವಿಜಯಿಯಾದ ಸ್ಪಾರ್ಟಾ

೩೫ ವರ್ಷಗಳ ವರೆಗೆ ಗ್ರೀಸಿನಲ್ಲಿ ಪ್ರಮುಖ ರಾಜ್ಯವಾಗಿ ಮೆರೆಯಿತು.

**ಗ್ರೀಸಿನ ಪತನ:** ಸ್ಪಾರ್ಟಾದ ಕಠೋರವಾದ ದಂಡಿನಾಳಿಕೆಗೆ ಬೇಸತ್ತು ಥೀಬ್ಸ್ ರಾಜ್ಯ ದಂಗೆಯೆದ್ದಿತು. ಕ್ರಿ. ಪೂ. ೩೭೧ರಲ್ಲಿ ಥೀಬ್ಸ್ ರಾಜ್ಯವು ಸ್ಪಾರ್ಟಾವನ್ನು ಸೋಲಿಸಿತು. ಕ್ರಿ ಪೂ. ೪ನೇ ಶತಮಾನದ ಮಧ್ಯ ಭಾಗದ ಹೊತ್ತಿಗೆ ಗ್ರೀಸಿನಲ್ಲಿ ಯಾವ ನಗರ ರಾಜ್ಯವೂ ಪ್ರಬಲವಾಗಿರಲಿಲ್ಲ. ಅಂತಯುದ್ಧಗಳಿಂದ ಗ್ರೀಸ್ ತೀರ ಬಲಹೀನವಾಗಿತ್ತು. ಕ್ರಿ. ಪೂ. ೩೩೮ ರಲ್ಲಿ ಮೆಸ-ಡೋನಿಯಾದ ದೊರೆ ಫಿಲಿಪ್ ಗ್ರೀಸಿನ ಮೇಲೆ ದಾಳಿಯಿಟ್ಟಾಗ ಗ್ರೀಕರಿಗೆ ಅವನನ್ನು ಎದುರಿಸುವದಾಗಲಿಲ್ಲ. ಮಹಾನ್ ಸಂಸ್ಕೃತಿಯ ನಿರ್ಮಾಪಕರಾದ ಗ್ರೀಕರು ತಮ್ಮಲ್ಲಿಯ ಆಂತರಿಕ ಕಲಹ. ಒಡಕಿನ ಕಾರಣಗಳಿಂದಾಗಿ ರಾಜಕೀಯ ಸ್ವಾತಂತ್ರ್ಯವನ್ನೇ ಕಳೆದುಕೊಳ್ಳಬೇಕಾಯಿತು. ಇಂತಹ ಐತಿಹಾಸಿಕ ಸಂಗತಿಗಳಿಂದ ಭಾರತೀಯರು ಇಂದು ಪಾಠ ಕಲಿಯಬೇಕಾಗಿದೆ.

## ಅಧ್ಯಾಯ ೨.

# ಗ್ರೀಕರ ಅಮರ ಕೊಡುಗೆಗಳು

"ಅನೇಕ ವಿಧದಲ್ಲಿ, ನಮ್ಮ ಹಾಗೂ ಪ್ರಾಚೀನ ಗ್ರೀಕರ ಯುಗಗಳು ಭಿನ್ನವಾಗಿದ್ದರೂ, ನಮ್ಮದು ಪ್ರಾಚೀನ ಗ್ರೀಸಿನೊಡನೆ ಹೊಂದಿರುವಂತಹ ನಿಕಟ ಸಂಬಂಧವನ್ನು ಬೇರೆ ಯಾವ ಯುಗವೂ ಹೊಂದಿಲ್ಲ; ನಮ್ಮ ಆಂತರಿಕ ಜೀವನವು ಪ್ರಾಚೀನ ಗ್ರೀಕರ ಆದರ್ಶಗಳ ನೆಲೆಗಟ್ಟಿನ ಮೇಲೆ ನಿಂತಿರುವಂತೆ ಮತ್ತಾವ ಜನಾಂಗವೂ ನಿಂತಿಲ್ಲ" —ಆರ್. ಡಬ್ಲ್ಯು. ಲಿವಿಂಗಸ್ಟನ್

ಮೇಲಿನ ಅಭಿಪ್ರಾಯದ ಸತ್ಯತೆಯನ್ನು ಮನಗಾಣಲು ನಾವು ಪ್ರಾಚೀನ ಗ್ರೀಕರ ಕೊಡುಗೆಗಳನ್ನು ಮತ್ತು ಅವುಗಳು ಇಂದಿನ ವರೆಗೆ ಹೇಗೆ ಉಳಿದುಕೊಂಡು ಬಂದು, ನಮ್ಮ ಆಧುನಿಕ ನಾಗರಿಕತೆಯಲ್ಲಿ ಹಾಸು ಹೊಕ್ಕಾಗಿವೆಯೆಂಬುದನ್ನು ಅರಿತುಕೊಳ್ಳುವುದು ಅವಶ್ಯ.

ಬಹುಮುಖ ಪ್ರತಿಭೆ, ಕುಶಾಗ್ರಮತಿ, ಪರಿಪೂರ್ಣತೆಯ ಹಂಬಲ, ಅಪಾರ ಕಲ್ಪನಾ ಸಾಮರ್ಥ್ಯ, ವಿಚಾರಶೀಲತೆ ಮತ್ತು ಸೌಂದರ್ಯ ಪ್ರಜ್ಞೆ ಇವುಗಳು ಪ್ರಾಚೀನ ಗ್ರೀಕರ ಪ್ರಧಾನ ವೈಶಿಷ್ಟ್ಯಗಳು, ಕೃಷಿ. ಕೈಗಾರಿಕೆ, ವ್ಯಾಪಾರ ಮುಂತಾದ ಆರ್ಥಿಕ ರಂಗದಲ್ಲಿ ಇವರು ಹೇಳಿಕೊಳ್ಳುವಂತಹ ಸಾಧನೆಗಳನ್ನು ಮಾಡಲಿಲ್ಲ. ಗ್ರೀಕರು ಸಾಂಸ್ಕೃತಿಕ ರಂಗದಲ್ಲಿಯೇ ಹೆಚ್ಚು

ಅಭಿರುಚಿ ತಳೆದಿದ್ದರು. ಗ್ರೀಕ್ ಕಸಬುದಾರರು ಸಹ ಹಣ ಸಂಪಾದನೆಯನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಳ್ಳದೆ, ತಮ್ಮ ಕೆಲಸದಲ್ಲಿ ಕಲಾಪರಿಪೂರ್ಣತೆ ಸಾಧಿಸಲು ಇಚ್ಛಿಸುತ್ತಿದ್ದರು. ರಾಜಕಾರಣ, ಸಾಹಿತ್ಯ, ಮತ್ತು ಕಲಾ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸುವುದಕ್ಕಾಗಿ ದುಡಿಯುವುದು ಗೌರವಾನ್ವಿತವೆಂದು ಗ್ರೀಕರು ತಿಳಿಯುತ್ತಿದ್ದರು.

ಗ್ರೀಸ್ ಮತ್ತು ಪರ್ಶಿಯಗಳ ನಡುವೆ ಜರುಗಿದ ಯುದ್ಧಗಳ ಒಂದು ಶತಮಾನದ ಹಿಂದೆಯೇ ಗ್ರೀಕ್ ಸಂಸ್ಕೃತಿ ವೃಕ್ಷವು ತನ್ನ ನೂತನ ಶಾಖೆಗಳನ್ನು ಪ್ರತಿಯೊಂದು ದಿಸೆಯಲ್ಲಿಯೂ ಹೊರ ಹೊಮ್ಮಿಸಿತು. ಆಗ ಗ್ರೀಕರು ತಮ್ಮ ಕಾವ್ಯ, ಕಲೆ, ಇತಿಹಾಸ ಮತ್ತು ತಾತ್ವಿಕ ಕ್ಷೇತ್ರಗಳಲ್ಲಿ ಶ್ರೇಷ್ಠತೆಯ ಹೊಸ ಗುಣಮಟ್ಟವನ್ನು ರೂಪಿಸಿದರು. ನೈತಿಕ, ಬೌದ್ಧಿಕ ಮತ್ತು ಕಲ್ಪನಾ ರಂಗಗಳಲ್ಲಿ ಅಪ್ರತಿಮ ಪ್ರಗತಿಗೆ ಅವಕಾಶವುಂಟಾಯಿತು. ಪರ್ಶಿಯನ್ ಯುದ್ಧಗಳ ನಂತರ ಗ್ರೀಕರು ದೇವ ಪುತ್ರರಂತೆ ಜೀವಿಸಿದರು; ವಿಚಾರ ಮಥನ ಮಾಡಿದರು; ಅತ್ಯದ್ಭುತ ಕೃತಿಗಳನ್ನು ಸೃಷ್ಟಿಸಿದರು. ಅವರಲ್ಲಿ ಅತಿಮಾನವ ಶಕ್ತಿ ಸಂಚರಿಸಿತು. ಮಾನವ ಅಂತಃಸತ್ವದ ಅತಿ ದೂರದ ಮೇರೆಗಳನ್ನು ಶೀಘ್ರವಾಗಿ ತಲುಪಲು ಯತ್ನಿಸಿದರು.

ಜೀವನದ ವಿವಿಧ ಕ್ಷೇತ್ರಗಳಲ್ಲಿ ಗ್ರೀಕರು ಕೊಟ್ಟ ಕೊಡುಗೆಗಳ ಅಧ್ಯಯನವು ಅತ್ಯಂತ ಉದ್ಬೋಧಕವೂ ಸ್ಫೂರ್ತಿದಾಯಕವೂ ಆಗಿದೆ. ಇಂತಹ ಅಭ್ಯಾಸದಿಂದ, ಮಾನವ ಬುದ್ಧಿಶಕ್ತಿಯ ವಿರಾಟ್ ಸ್ವರೂಪದ ಅರಿವುಂಟಾಗುತ್ತದೆ. ರಾಜ

ಕಾರಣ. ರಾಜ್ಯತತ್ವ ಚಿಂತನೆ, ವಕ್ತೃತ್ವ ಕಲೆ, ಶಿಕ್ಷಣ ಮತ್ತು ಕ್ರೀಡಾರಂಗ, ಸಾಹಿತ್ಯ, ನಾಟಕ, ಇತಿಹಾಸ, ಕಲೆ, ವಿಜ್ಞಾನ ಮತ್ತು ತತ್ವಜ್ಞಾನ ರಂಗಗಳಲ್ಲಿ ಗ್ರೀಕರು ನೀಡಿದ ಅಮರ ಕೊಡುಗೆಗಳ ಪರಿಚಯ ಮಾಡಿಕೊಳ್ಳೋಣ.

## ೧. ಗ್ರೀಕರ ಜೀವನ ದೃಷ್ಟಿಕೋನ ಮತ್ತು ಆದರ್ಶಗಳು

ಮಾನವ ಕುಲಕ್ಕೆ ಗ್ರೀಕರು ಕೊಟ್ಟ ಅಪೂರ್ವ ಕಾಣಿಕೆಯೆಂದರೆ ಅವರ ಜೀವನ ದೃಷ್ಟಿಕೋನ ಮತ್ತು ಮಹಾನ್ ಆದರ್ಶಗಳು. ಅವರು ಈ ವಿಶ್ವ ಮತ್ತು ಮಾನವ ಜೀವನದ ಎಲ್ಲ ಅಂಶಗಳನ್ನು ಅಪಾರ ಕುತೂಹಲತೆಯಿಂದ ಗ್ರಹಿಸಿದರು ಮತ್ತು ಅವುಗಳನ್ನು ಸೂಕ್ಷ್ಮ ರೀತಿಯಲ್ಲಿ ವಿಮರ್ಶಿಸಿದರು. ಇದರ ಪರಿಣಾಮವಾಗಿ ಗ್ರೀಕರು ಜೀವನದ ಬಗ್ಗೆ ನಿಷ್ಠೆ, ಗೌರವ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಬೆಳೆಸಿಕೊಂಡರು. ಜೀವನವನ್ನು ಇಡಿಯಾಗಿ ನೋಡಿದ ಗ್ರೀಕರು ತುಂಬು ಜೀವನದ ಸಾಧನೆಗಾಗಿ ಶ್ರದ್ಧೆ, ಉತ್ಸಾಹಗಳಿಂದ ಪ್ರೇರಿತರಾಗಿ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿದರು. ವಾಸ್ತವಿಕ ಜೀವನದ ಸಾರ್ಥಕತೆ ಮತ್ತು ಆತ್ಮೋನ್ನತಿಯ ಧ್ಯೇಯ ಸಾಧನೆ ಇವೆರಡರಲ್ಲೂ ಸಮತೋಲವಾದ ಆಸಕ್ತಿಯನ್ನು ರೂಢಿಸಿಕೊಂಡದ್ದು ಗ್ರೀಕ್ ಪ್ರಜ್ಞೆಯ ಹೆಚ್ಚಳವೇ ಸರಿ.

ಪ್ರಾಚೀನ ಗ್ರೀಕರು ಧರ್ಮಕ್ಕಿಂತಲೂ ಹೆಚ್ಚಾಗಿ ವಿಜ್ಞಾನದ ಮೂಲಕವೇ ತಮ್ಮ ನಾಗರಿಕತೆಯನ್ನು ಸತ್ವಯುತ ಗೊಳಿ

ಸಿದರು. ಮನುಷ್ಯ, ಅವನ ಶರೀರ ಮತ್ತು ಮನಸ್ಸುಗಳನ್ನು ಆಳವಾಗಿ ಅಭ್ಯಸಿಸಿದರು. "ಸಶಕ್ತ ಶರೀರದಲ್ಲಿ ಸುಸ್ಥಿರವಾದ ಮತ್ತು ಸಮರ್ಥವಾದ ಮನಸ್ಸು" ಎಂಬುದನ್ನರಿತ ಗ್ರೀಕರು ಮೈ-ಮನಗಳೆರಡನ್ನೂ ಹದಗೊಳಿಸಬಲ್ಲ ಶಿಕ್ಷಣ ಕ್ರಮವನ್ನು ಅನುಸರಿಸಿದ್ದರು. ಓದು, ಬರೆಹ, ಗಣಿತ, ಸಂಗೀತ, ಮಾತು ಗಾರಿಕೆ, ವ್ಯಾಯಾಮ ಮತ್ತು ವಿವಿಧ ಕ್ರೀಡೆಗಳು ಮಕ್ಕಳ ಶಿಕ್ಷಣದ ಮಹತ್ವದ ಅಂಗಗಳಾಗಿದ್ದವು. ವ್ಯಾಯಾಮ ಶಾಲೆ ಗಳಲ್ಲಿ ಮಕ್ಕಳಿಗೆ ನಿಯಮಿತವಾಗಿ ಶಾರೀರಕ ತರಬೇತಿ ಕೊಡ ಲಾಗುತ್ತಿತ್ತು. ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಪಶ್ಚಿಮ ಪೆಲಪೊನಿಸದಲ್ಲಿಯ ಓಲಿಂಪಿಯಾದಲ್ಲಿ ಸುಪ್ರಸಿದ್ಧವಾದ ಓಲಿಂ ಪಿಕ್ ಕ್ರೀಡಾಸ್ಪರ್ಧೆಗಳು ಜರುಗುತ್ತಿದ್ದವು. ಈ ಸ್ಪರ್ಧೆಯಲ್ಲಿ ಗ್ರೀಸಿನ ಎಲ್ಲ ಕ್ರೀಡಾಪಟುಗಳೂ ಭಾಗವಹಿಸುವ ಅವಕಾಶ ವಿದ್ದಿತು. ಡಿಸ್ಕ್ (ಚಕ್ರ) ಎಸೆತ, ವೇಗದ ಓಟ, ಕುಸ್ತಿ, ಉದ್ದ ಜಿಗಿತ ಮತ್ತು ಜವೆಲಿನ್ (ಭರ್ಚಿ) ಎಸೆತ ಸ್ಪರ್ಧೆಗಳು ಜರುಗುತ್ತಿದ್ದವು. ಆ ಉತ್ಸವದ ಕೊನೆಯ ದಿನ ವಿಜೇತರ ಹೆಸರುಗಳನ್ನು ಘೋಷಿಸಿ, ಅವರಿಗೆ ಸನ್ಮಾನ ಮಾಡುತ್ತಿದ್ದರು. ಓಲಿಂಪಿಕ್ ವಿಜೇತರಿಗೆ ಅವರ ನಗರಗಳಲ್ಲಿ ಅಭಿಮಾನಪೂರಿತ ಅದ್ದೂರಿಯ ಸ್ವಾಗತ, ಸನ್ಮಾನ ದೊರಕುತ್ತಿತ್ತು. ಶ್ರೇಷ್ಠ ಕ್ರೀಡಾ ಪಟುಗಳ ಪ್ರತಿಮೆಗಳನ್ನು ಕೂಟರಸ್ತೆಗಳಲ್ಲಿ ನಿಲ್ಲಿಸು ತ್ತಿದ್ದರು.

ಅಂಗ ಸೌಷ್ಠವವನ್ನು ಪಡೆಯಲು ಮತ್ತು ಉಳಿಸಿ ಕೊಳ್ಳಲು ಗ್ರೀಕರು ತವಕ ಪಡುತ್ತಿದ್ದರು. ಪ್ರತಿಯೊಂದು

ನಗರದಲ್ಲಿ ಸಾರ್ವಜನಿಕ ಗರಡಿಮನೆಗಳಿದ್ದವು. ಕ್ರೀಡೆಗಳು ಪುರುಷರಿಗೆ ಮನರಂಜನೆಯ ಪ್ರಮುಖ ಸಾಧನವಾಗಿದ್ದವು. ಗ್ರೀಕರಿಗೆ ಬಯಲು ಜೀವನದಲ್ಲಿ ತುಂಬ ಆಸಕ್ತಿ ಇದ್ದಿತು.

ಪ್ರಾಚೀನ ಗ್ರೀಕರು ಸ್ವಾತಂತ್ರ್ಯಪ್ರಿಯರೂ, ಆಶಾವಾದಿಗಳೂ, ಸಾಹಸಿಗಳೂ, ಸೌಂದರ್ಯಾರಾಧಕರೂ ಆಗಿದ್ದರು. ಒಳ್ಳೆಯದನ್ನೆಲ್ಲ ರೂಢಿಸಿಕೊಂಡರು; ಸುಂದರವಾದುದನ್ನೆಲ್ಲ ಮೆಚ್ಚಿಕೊಂಡರು. "ಸತ್ಯಂ-ಶಿವಂ-ಸುಂದರಂ" ಎಂಬುದು ಗ್ರೀಕರ ಪರಿಪೂರ್ಣತೆಯ ಆದರ್ಶವಾಗಿತ್ತು. ಈ ಮಹಾನ್ ತತ್ವವನ್ನು ವ್ಯಕ್ತಿಯಲ್ಲಿ ಹಾಗೂ ಸಮಾಜದಲ್ಲ, ಕಲೆ, ಸಾಹಿತ್ಯ, ತತ್ವಜ್ಞಾನ ಮತ್ತು ವಿಜ್ಞಾನದಲ್ಲಿ ಅನುಷ್ಠಾನಕ್ಕೆ ತರಲು ಅವಿರತವಾಗಿ ಯತ್ನಿಸಿದರು.

ಪ್ರಾಚೀನ ಗ್ರೀಸಿನಲ್ಲಿ ಪುರೋಹಿತ ವರ್ಗದ ಪ್ರಾಬಲ್ಯವಿರಲಿಲ್ಲ. ಅದರ ದೇವತೆಗಳು ಅಸಂಖ್ಯ; ಗ್ರೀಕ್ ದೇವತೆಗಳ ವೈಶಿಷ್ಟ್ಯವೆಂದರೆ. ಅವರಿಗೂ ಮಾನವರ ಶರೀರ, ಗುಣ-ದೋಷಗಳು, ಆಶೆ-ಆಕಾಂಕ್ಷೆಗಳು ಇರುವವೆಂದು ಗ್ರೀಕರ ನಂಬಿಕೆಯಾಗಿತ್ತು. ಗ್ರೀಕ್ ದೇವತೆಗಳು ಅತಿ-ಮಾನವರಷ್ಟೇ. ಅವರಿಗೆ ಅಮರತ್ವವಿದೆಯೆಂದು ಗ್ರೀಕರು ಭಾವಿಸಿದ್ದರು. ಇತರ ಜನಾಂಗಗಳಲ್ಲಿ ಕಂಡು ಬರುವ ದೇವ ಮತ್ತು ಮಾನವರ ಗಾಢವಾದ ಧಾರ್ಮಿಕ ಸಂಬಂಧವು ಗ್ರೀಕರಲ್ಲಿ ಇರಲಿಲ್ಲ. ತಮ್ಮ ಕಾರ್ಯಗಳಲ್ಲಿಯೇ ತೊಡಗಿರುವ ಮತ್ತು ಜನರ ಬಗ್ಗೆ ಲಕ್ಷ್ಯ ಪೂರೈಸಲು ಅವಕಾಶವಿಲ್ಲದ ದೇವತೆಗಳ ಕಡೆಗೆ ಹೆಚ್ಚಿನ ಗಮನ ಕೊಡುವುದು ಅನವಶ್ಯಕವೆಂದು ಗ್ರೀಕರು ಭಾವಿಸಿದ್ದರು.

ಧಾರ್ಮಿಕ ಉತ್ಸವದ ದಿನಗಳಲ್ಲಿ, ಶಾಸನ ಸಭೆಗಳು ಪ್ರಾರಂಭ ವಾಗುವಾಗ ಮತ್ತು ಹುಟ್ಟು, ಸಾವು ಮದುವೆ ಮುಂತಾದ ಮಹತ್ವದ ಪ್ರಸಂಗಗಳಲ್ಲಿ ಗ್ರೀಕರು ಯಜ್ಞ ನೆರವೇರಿಸಿ, ಮಿತ್ರ ರಾಗಿದ್ದ ದೇವತೆಗಳ ಸದೀಚ್ಛೆಯನ್ನು ಉಳಿಸಿಕೊಳ್ಳಲು ಬಯ ಸುತ್ತಿದ್ದರು. ತಮಗೆ ವಿರೋಧಿಗಳಾಗಿದ್ದ ದೇವತೆಗಳ ವೈರ ಭಾವವನ್ನು ಶಮನಗೊಳಿಸುವುದೂ ಯಜ್ಞದ ಉದ್ದೇಶವಾಗಿರು ತ್ತಿತ್ತು. ಗ್ರೀಕರಿಗೆ ತಮ್ಮ ದೇವತೆಗಳ ವಿಷಯವಾಗಿ ಅತಿಶಯ ವಾದ ಭಯವಿರಲಿಲ್ಲ. ದೇವರನ್ನು ಮಾನವತ್ವದ ತಳಹದಿಯ ಮೇಲಿರಿಸಿದ್ದ ಗ್ರೀಕರು ತಮ್ಮ ಜೀವನವನ್ನು ದೈವತ್ವದ ಮಟ್ಟ ಕ್ಕೇರಿಸಲು ಯತ್ನಿಸಿದರು. ಸ್ವರ್ಗದಿಂದ ಬಂದ ಆತ್ಮವು ಸ್ವರ್ಗದೆ ಡೆಗೇ ಹೋಗಬೇಕೆಂಬ ಉದಾತ್ತ ಕಲ್ಪನೆ ಅವರಲ್ಲಿತ್ತು. ಅತಿ ರೇಕವಾದುದನ್ನೆಲ್ಲ ತ್ಯಜಿಸಿ, ಸಮತೂಕದ ಮಧ್ಯಮ ಮಾರ್ಗ ವನ್ನನುಸರಿಸುವುದು ಗ್ರೀಕರ ಕ್ರಮವಾಗಿತ್ತು. ವಿಚಾರ ಶೀಲ ತೆಯೇ ಜೀವನಕ್ಕೆ ಮಾರ್ಗದರ್ಶಿಯೆಂದು ಅವರು ಅರಿತಿದ್ದರು.

## ೨. ರಾಜಕಾರಣ ಮತ್ತು ರಾಜ್ಯತತ್ವ ಚಿಂತನೆ

ರಾಜಕಾರಣ ಮತ್ತು ರಾಜ್ಯಶಾಸ್ತ್ರಗಳಲ್ಲಿ ಪ್ರಾಚೀನ ಗ್ರೀಕರ ಸಾಧನೆಗಳು ನಿಜವಾಗಿಯೂ ಅಸ್ವಾದೃಶವಾಗಿವೆ. "ಪೊಲಿಟಿಕ್ಸ್" ಎಂಬುದು ಗ್ರೀಕ್ ಶಬ್ದ. ಗ್ರೀಕರ ರಾಜಕೀಯ ಪ್ರಜ್ಞೆ ಮೇಲ್ಮಟ್ಟದ್ದಾಗಿದ್ದಿತು. ಅವರಲ್ಲಿದ್ದಂತಹ ತೀಕ್ಷ್ಣವಾದ ರಾಜ್ಯಪ್ರೇಮ, ಅಭಿಮಾನಗಳು ಮತ್ತಾವ ಪ್ರಾಚೀನ ಜನಾಂಗ ಗಳಲ್ಲಿ ಕಂಡು ಬರುವುದಿಲ್ಲ. ಪ್ರಾಚೀನ ಗ್ರೀಕರು ವ್ಯಕ್ತಿಯ

ಮಹತ್ವವನ್ನು ಗುರುತಿಸುವಲ್ಲಿ ಮೊದಲಿಗರೆಂದು ಹೇಳಬಹುದು. ಇತರ ಪ್ರಾಚೀನ ನಾಡುಗಳಲ್ಲಿ ವ್ಯಕ್ತಿಯು ದೇವರ ಮತ್ತು ದೊರೆಗಳ ದಾಸನಾಗಿದ್ದ. ವ್ಯಕ್ತಿ ಜೀವನದ ವಿಕಾಸಕ್ಕೆ ವಿಶೇಷ ಗಮನವಿರಲಿಲ್ಲ. ಆದರೆ ಪ್ರಾಚೀನ ಗ್ರೀಕರು ವ್ಯಕ್ತಿಯ ಸರ್ವತೋಮುಖ ವಿಕಾಸವನ್ನೇ ತಳಹದಿಯನ್ನಾಗಿಟ್ಟುಕೊಂಡು ಸುಖೀ ಸಮಾಜ ಜೀವನದ ಸಿದ್ಧಾಂತವನ್ನು ರೂಪಿಸಿದರು.

ಪ್ರಜಾಪ್ರಭುತ್ವ ಗ್ರೀಕರ ಮಹತ್ವದ ಕೊಡುಗೆ. ನೈಜ ಅರ್ಥದಲ್ಲಿ ಅವರೇ ಪ್ರಥಮ ಪ್ರಜಾಪ್ರಭುತ್ವವಾದಿಗಳು. ರಾಜ ಪ್ರಭುತ್ವ, ಶ್ರೀಮಂತರ ಪ್ರಭುತ್ವ, ನಿರಂಕುಶಾಧಿಕಾರ (Tyranny) ಅಥವಾ ಸರ್ವಾಧಿಕಾರತ್ವದ ರಾಜಕೀಯ ಪ್ರಯೋಗಗಳನ್ನು ಒಂದರ ನಂತರ ಒಂದಾಗಿ ಜಾರಿಗೆ ತಂದ ಗ್ರೀಕರು, ಕೊನೆಗೆ ವ್ಯಕ್ತಿಯ ಆಶೋತ್ತರಗಳನ್ನು ಪರಿಣಾಮ ಕಾರಿಯಾಗಿ ಉದ್ದೇಶಿಸಬಲ್ಲ ಪ್ರತ್ಯಕ್ಷ ಪ್ರಜಾಪ್ರಭುತ್ವವನ್ನು ಅನುಷ್ಠಾನಕ್ಕೆ ತಂದರು. ಈ ದಿಶೆಯಲ್ಲಿ ಅಥೆನ್ಸ್ ಅಗ್ರಗಾಮಿಯಾಗಿತ್ತು. ಅಥೆನ್ಸಿನ ಸೊಲನ್ (ಕ್ರಿ. ಪೂ. ೫೯೪), ಕ್ಲೀಸ್ತಿನೀಸ್ (ಕ್ರಿ. ಪೂ. ೫೦೯) ಮತ್ತು ಪೆರಿಕ್ಲೀಸ್ (ಕ್ರಿ. ಪೂ. ೪೬೦-೪೨೯) ಇವರು ಮಾಡಿದ ರಾಜಕೀಯ ಸುಧಾರಣೆಗಳು ಅಥೆನ್ಸಿನ ಪ್ರಜಾಸತ್ತೆಯ ತಳಹದಿಯನ್ನು ವಿಸ್ತರಿಸಿದುವು ಮತ್ತು ಬಲಪಡಿಸಿದುವು.

ಅಥೆನ್ಸಿನ ಡ್ರೆಕೋ (ಕ್ರಿ. ಪೂ. ೬೨೧) ಎಂಬವನು ಪ್ರಥಮ ಕಾನೂನು ನಿರ್ಮಾಪಕನು. ಇವನ ಕಾಯ್ದೆಗಳು ಕಠೋರವಾಗಿದ್ದುದರಿಂದ ಸೊಲನ್ ಎಂಬವನು ಅವುಗಳಲ್ಲಿ ಅನೇಕ ಬದಲಾವಣೆಗಳನ್ನು ಮಾಡಿದನು. ಸೋಲನ್‌ನ ಸುಧಾ

ರಣೆಗಳಿಂದಾಗಿ ಸಾಲಕ್ಕಾಗಿ ಗುಲಾಮರಾದವರು ಗುಲಾಮ ತನದಿಂದ ಮುಕ್ತರಾದರು. ಮುಂದೆ ಸಾಲದ ಕಾರಣದಿಂದ ಯಾವನನ್ನೂ ಗುಲಾಮನನ್ನಾಗಿ ಮಾಡುವ ಪದ್ಧತಿಯು ನಿಷೇಧಿಸಲ್ಪಟ್ಟಿತು. ಅಧಿಕಾರಾವಧಿಯ ನಂತರ ಸಾರ್ವಜನಿಕ ಅಧಿಕಾರಿಗಳ (ಮ್ಯಾಜಿಸ್ಟ್ರೇಟರು) ವರ್ತನೆಯನ್ನು 'ಹೆಲಿಯ' ಎಂಬ ಜನತಾ ನ್ಯಾಯಾಲಯವು ಪರೀಕ್ಷಿಸುವ ಮತ್ತು ತಪ್ಪಿಸ್ಥ ರೆಂದು ತೀರ್ಮಾನವಾದ ಅಧಿಕಾರಿಗಳಿಗೆ ತಕ್ಕ ಶಿಕ್ಷೆ ಕೊಡುವ ಪದ್ಧತಿಯು ಬಳಕೆಯಲ್ಲಿ ಬಂದಿತು. ಸೊಲನ್‌ನ ರಾಜ್ಯಪದ್ಧ ತಿಯು ಸಂಪೂರ್ಣವಾಗಿ ಪ್ರಜಾಸತ್ತಾತ್ಮಕ ಸ್ವರೂಪದ್ದಾಗಿರ ದಿದ್ದರೂ, ಅದು ಸಾಮಾನ್ಯ ನಾಗರಿಕರ ಸ್ವಾತಂತ್ರ್ಯಕ್ಕೆ ಎಡೆ ಮಾಡಿಕೊಟ್ಟಿತು. ಆದರೂ, ಅಥೆನ್ಸಿನ ಸರಕಾರದ ಸೂತ್ರಗಳು ಕೇವಲ ಶ್ರೀಮಂತರ ಅಧೀನವಾಗಿದ್ದವು. ಈ ದೋಷವನ್ನು ನಿವಾರಿಸಿ, ಅಥೆನ್ಸಿನ ಪ್ರಜಾಸತ್ತೆಗೆ ವಿಶಾಲ ತಳಹದಿಯನ್ನು ಒದಗಿಸಿದವನು ಕ್ಲೀಸ್ತಿನೀಸ್. ಇವನು ಎಲ್ಲ ಸ್ವತಂತ್ರ ನಾಗ ರಿಕರಿಗೆ ಪೌರತ್ವದ ಹಕ್ಕುಗಳನ್ನು ದಯಪಾಲಿಸಿದನು; ಸೊಲ ನ್‌ನು ಏರ್ಪಡಿಸಿದ್ದ ವರ್ಗಭೇದವನ್ನು ನಿವಾರಿಸಿದನು; ಐದು ನೂರು ಲೋಕನಿಯುಕ್ತ ಸದಸ್ಯರ ಪರಿಷತ್ತನ್ನು ರಚಿಸಿದನು. ಈ ಸದಸ್ಯರ ಅಧಿಕಾರದ ಅವಧಿ ಒಂದು ವರ್ಷ. ಅವರನ್ನು ಚೀಟಿ ಎತ್ತುವ ಮೂಲಕ ಆಯ್ಕೆ ಮಾಡಲಾಗುತ್ತಿತ್ತು. ಯಾವ ನೊಬ್ಬ ಪೌರನು ಎರಡು ಸಲಕ್ಕಿಂತಲೂ ಹೆಚ್ಚು ಬಾರಿ ಆ ಪರಿ ಷತ್ತಿನ ಸದಸ್ಯನಾಗಲು ಅವಕಾಶವಿಲ್ಲದ್ದರಿಂದ, ಬಹುಸಂಖ್ಯಾತ ಪೌರರಿಗೆ ಪರಿಷತ್ತಿನ ಸದಸ್ಯತ್ವ ಪಡೆಯುವ ಸುಸಂಧಿ ಇದ್ದಿತು.

ಎಲ್ಲ ಪುರುಷ ಪೌರರಿಗೆ ಸರಕಾರದಲ್ಲಿ ಪಾಲುಗೊಳ್ಳುವ ಅವಕಾಶ ಕಲ್ಪಿಸಿ ಕೊಡುವಲ್ಲಿ ಇಡೀ ಜಗತ್ತಿನಲ್ಲಿಯೇ ಅಥೆನ್ಸ್ ಪ್ರಥಮ ರಾಜ್ಯವಾಗಿತ್ತು.

ರಾಜ್ಯಕ್ಕೆ ಅಪಾಯಕಾರಿಯೆನಿಸಿದ ಯಾವುದೇ ಪ್ರಮುಖ ವ್ಯಕ್ತಿಯನ್ನು ಅಥೆನ್ಸಿನ ಪೌರರು ೬೦೦೦ ಕ್ಕೂ ಕಡಿಮೆಯಿಲ್ಲದ ಮತಗಳಿಂದ ಗಡಿಪಾರುಗೊಳಿಸುವ ಕ್ರಮವನ್ನು ಜಾರಿಗೆ ತಂದ ವನು ಕ್ಲೀಸ್ಥಿನೀಸ್. ಈತನು ನಿರ್ಮಿಸಿದ ರಾಜ್ಯ ವ್ಯವಸ್ಥೆಯು ಮುಂದಿನ ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಭದ್ರ ಬುನಾದಿ ಯಾಯಿತು. ಅಂತೆಯೇ ಕ್ಲೀಸ್ಥಿನೀಸನನ್ನು 'ಅಥೆನ್ಸಿನ ಪ್ರಜಾ ಸತ್ತೆಯ ಜನಕ' ಎಂದು ಬಣ್ಣಿಸಲಾಗಿದೆ.

ಕ್ರಿ. ಪೂ. ೪೬೦-೪೨೯ ಈ ಕಾಲಾವಧಿಯಲ್ಲಿ ಗ್ರೀಕ್ ಪ್ರಜಾಪ್ರಭುತ್ವ ಪರಿಪಕ್ವಗೊಂಡಿತು ಮಹಾ ಮುತ್ಸದ್ದಿಯೂ ಶ್ರೇಷ್ಠ ರಾಜಕಾರಣಿಯೂ, ಮೇಧಾವಿಯೂ ಆಗಿದ್ದ ಪೆರಿಕ್ಲೀಸ್ ಮೂವತ್ತು ವರ್ಷಗಳ ತನ್ನ ಆಳಿಕೆಯಲ್ಲಿ ಅಥೆನ್ಸನ್ನು ಮಾದ ರಿಯ ಪ್ರಜಾಪ್ರಭುತ್ವವನ್ನಾಗಿ ಮಾಡಿದನು. ಪರ್ಶಿಯನ್ ಯುದ್ಧಗಳ ನಂತರ ತಲೆದೋರಿದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಅಥೆನ್ಸಿನ ರಾಜಕೀಯ ಜೀವನದ ಮೇಲೆ ತಮ್ಮ ಪ್ರಭಾವ ಬೀರಿದವು. ಪೆರಿಕ್ಲೀಸನು ಏರಿಯೊಪೆಗಸ್ ಕೌನ್ಸಿಲ್ಲಿನ ಅಧಿಕಾರಗಳನ್ನೂ ಕಡಿಮೆ ಮಾಡಿ, ಅವುಗಳನ್ನು ಐದು ನೂರು ಸದಸ್ಯರ ಪರಿಷತ್ತಿಗೆ(Council of Five Hundred) ವರ್ಗಾಯಿಸಿದನು; ನ್ಯಾಯಾಲಯಗಳ ಅಧಿಕಾರಗಳನ್ನೂ ಹೆಚ್ಚಿಸಿದನು. ಗ್ರೀಕ್ ಪ್ರಜಾತಂತ್ರದಲ್ಲಿ ಅತ್ಯಂತ ಮಹತ್ವದ

ವೈಶಿಷ್ಟ್ಯವೆಂದರೆ ಜ್ಯೂರಿ ಪದ್ಧತಿ. ಈ ನ್ಯಾಯ ಪಂಚಾಯಿತಿ ಸದಸ್ಯರ ಸಂಖ್ಯೆಯೂ ಬಹು ದೊಡ್ಡದಾಗಿತ್ತು. ಅವರ ಸಂಖ್ಯೆಯು ಸಾಮಾನ್ಯವಾಗಿ ಐದು ನೂರು ಇಲ್ಲವೆ ಅದಕ್ಕೂ ಸ್ವಲ್ಪ ಹೆಚ್ಚಾಗಿರುತ್ತಿತ್ತು! ಒಂದು ವರ್ಷ ಅಧಿಕಾರಾವಧಿಯುಳ್ಳ ಈ ಸದಸ್ಯರನ್ನು ಚೀಟಿ ಎತ್ತುವ ಮೂಲಕ ಆಯ್ಕೆ ಮಾಡುತ್ತಿದ್ದರು. ಜ್ಯೂರಿ ಸದಸ್ಯರ ಸಂಖ್ಯೆಯು ಬಹು ದೊಡ್ಡದಾಗಿದ್ದುದರಿಂದ ಲಂಚಗುಳಿತನಕ್ಕೆ ಎಡೆಯಿರಲಿಲ್ಲ ಪ್ರತಿಯೊಬ್ಬ ಪೌರನೂ ಜ್ಯೂರಿ ಮಂಡಲಿಯಲ್ಲಿ ಸೇವೆ ಸಲ್ಲಿಸುವ ಅಧಿಕಾರ ಹೊಂದಿದ್ದನು. ಜ್ಯೂರಿ ಸದಸ್ಯರು ಹೆಚ್ಚು ದಕ್ಷತೆ ಮತ್ತು ಆಸಕ್ತಿಯಿಂದ ತಮ್ಮ ಕಾರ್ಯ ನಿರ್ವಹಿಸಲೆಂಬ ದೃಷ್ಟಿಯಿಂದ ಪೆರಿಕ್ಲೀಸನು ಅವರಿಗೆ ವೇತನ ಕೊಡುವ ಪದ್ಧತಿಯನ್ನು ಆರಂಭಿಸಿದನು. ಐದು ನೂರು ಸದಸ್ಯರ ಪರಿಷತ್ತಿಗೂ ಸರಕಾರಿ ವೇತನ ನೀಡುವ ಕ್ರಮ ಜಾರಿಗೆ ಬಂದಿತು. ಆಡಳಿತೆಯಲ್ಲಿ ನೇರವಾಗಿ ಭಾಗವಹಿಸದ ಪೌರನು ನಿರುಪಯೋಗಿಯೆಂದು ಪೆರಿಕ್ಲೀಸ್ ಹೇಳುತ್ತಿದ್ದನಂತೆ.

ಅಥೆನ್ಸಿನ ಮೇಲ್ಮೆಯನ್ನು ಕುರಿತು ಪೆರಿಕ್ಲೀಸ್ ಮಾಡಿದ ಘೋಷಣೆಯನ್ನು ಗ್ರೀಕ್ ಇತಿಹಾಸಕಾರ ಥ್ಯೂಸಿಡೈಡಸ್ ಹೀಗೆ ಉಲ್ಲೇಖಿಸಿದ್ದಾನೆ:—

"ನಾವು ನಮ್ಮ ನೆರೆಯ ರಾಜ್ಯಗಳ ಸರಕಾರ ಪದ್ಧತಿಯನ್ನು ಅನುಕರಣೆ ಮಾಡಿಲ್ಲ. ನಾವೇ ಅವುಗಳಿಗೆ ಶ್ರೇಷ್ಠ ಮಾದರಿ ಹಾಕಿ ಕೊಟ್ಟಿದ್ದೇವೆ. ನಮ್ಮ ರಾಜ್ಯ ವ್ಯವಸ್ಥೆಗೆ ಪ್ರಜಾಪ್ರಭುತ್ವವೆಂದು ಹೆಸರು. ಇಲ್ಲಿ ಆಡಳಿತ ಸೂತ್ರಗಳುಕೆಲವೇ

ಜನರ ಕೈಯಲ್ಲಿರದೆ, ಬಹುಸಂಖ್ಯಾತರ ಆಧೀನವಾಗಿವೆ. ನಮ್ಮ ಕಾಯ್ದೆಗಳು ಸಕಲರಿಗೂ ನ್ಯಾಯ ಒದಗಿಸುತ್ತವೆ........ನಮ್ಮ ಸಾರ್ವಜನಿಕ ಜೀವನದಲ್ಲಿ ಎಲ್ಲರಿಗೂ ನ್ಯಾಯಸಮ್ಮತವಾದ ಸ್ಥಾನಮಾನಗಳನ್ನು ಕೊಟ್ಟಿರುವಂತೆ. ನಿತ್ಯ ಜೀವನದಲ್ಲಿ ಪರಸ್ಪರ ನಡವಳಿಕೆಯಲ್ಲಿಯೂ ಅದೇ ತೆರನಾದ ದೃಷ್ಟಿಕೋನವನ್ನು ಇಟ್ಟುಕೊಂಡಿರುತ್ತೇವೆ............ಒಂದೇ ಮಾತಿನಲ್ಲಿ ಹೇಳುವ ದಾದರೆ, ನಮ್ಮ ನಗರ ರಾಜ್ಯವು ಇಡೀ ಗ್ರೀಸಿಗೆ ಶಿಕ್ಷಣ ನೀಡು ವಂತಿದೆಯೆಂದು ನಾನು ಹೇಳಬಲ್ಲೆ." ಈ ಹೇಳಿಕೆಯಿಂದ ಅಥೆನ್ಸನಲ್ಲಿ ಪ್ರಜಾಪ್ರಭುತ್ವವು ಕೇವಲ ಒಂದು ಸರಕಾರ ಪದ್ಧತಿಯಾಗಿರದೆ ಅದು ಜೀವನ ಕ್ರಮವೂ ಆಗಿತ್ತೆಂಬುದು ಕಂಡು ಬರುತ್ತದೆ.

'ಡೆಮೊಕ್ರಸಿ' ಗ್ರೀಕ್ ಶಬ್ದ, ಡೆಮೊಸ್ (Demos) ಎಂದರೆ ಜನರು; ಕ್ರಸಿಯೊ (Cracio) ಎಂದರೆ ಆಡಳಿತ. ಒಟ್ಟಾರೆ ಈ ಶಬ್ದದ ಅರ್ಥ 'ಪ್ರಜಾಪ್ರಭುತ್ವ' ಎಂದಾಯಿತು. ಸಾಮಾನ್ಯವಾಗಿ ಹತ್ತು, ಹದಿನೈದು ಸಾವಿರ ಪ್ರಜಾಸಂಖ್ಯೆಯನ್ನು ಮೀರದ ಗ್ರೀಕ್ ನಗರ-ರಾಜ್ಯಗಳು ಪ್ರತ್ಯಕ್ಷ ಪ್ರಜಾಸತ್ತೆಗೆ (Direct Democracy) ತಕ್ಕ ಪ್ರಯೋಗ ಕ್ಷೇತ್ರಗಳಾಗಿದ್ದವು. ಇಂದಿನ ವಿಶಾಲ ರಾಷ್ಟ್ರಗಳಲ್ಲಿ ಅನಿವಾರ್ಯವಾಗಿ ಪ್ರಾತಿನಿಧಿಕ ಪ್ರಜಾಸತ್ತೆಯನ್ನು ಏರ್ಪಡಿಸಲಾಗಿದೆ. ಪ್ರಾಚೀನ ಗ್ರೀಕರ ಪ್ರಜಾಪ್ರಭುತ್ವ ಸಂಕುಚಿತ ಸ್ವರೂಪದ್ದಾಗಿತ್ತು. ಅಲ್ಲಿ ಸ್ತ್ರೀಯರಿಗೆ, ಗುಲಾಮರಿಗೆ ಮತ್ತು ಪರನಾಡಿಗರಿಗೆ ಪೌರತ್ವದ ಹಕ್ಕುಗಳಿರಲಿಲ್ಲ. ಪೌರತ್ವ ಅನುವಂಶಿಕವಾದ ವಿಶೇಷ ಹಕ್ಕಾ

ಗಿತ್ತು. ಆದರೆ ಗ್ರೀಕ್ ಪೌರರಿಗೆ ಇಂದಿನ ಕಾಲದ ಪೌರರಿಗಿಂತಲೂ ಹೆಚ್ಚಿನ ರಾಜಕೀಯ ಪ್ರಜ್ಞೆ, ಆಡಳಿತೆಯಲ್ಲಿ ತೀವ್ರ ಆಸಕ್ತಿ ಹಾಗೂ ನೇರ ಪಾಲುಗಾರಿಕೆಯ ಅವಕಾಶಗಳಿದ್ದುವೆಂಬುದನ್ನು ಮರೆಯಲಾಗದು.

ರಾಜ್ಯತತ್ವ ಚಿಂತನೆಯಲ್ಲಿ ಗ್ರೀಕರು ಮೊದಲಿಗರು. ಪ್ಲೇಟೋ ಮತ್ತು ಅರಿಸ್ಟಾಟಲರು ಗ್ರೀಕ್ ರಾಜಕೀಯ ಸಿದ್ಧಾಂತಗಳನ್ನು ವಿಮರ್ಶಿಸಿದರು. 'ಹುಟ್ಟಿನಿಂದಲೇ ಎಲ್ಲ ಮನುಷ್ಯರು ಸರಿಸಮಾನರು' ಎಂಬ ವಿಚಾರವನ್ನು ಪ್ಲೇಟೋ ಅಲ್ಲಗಳೆದನು. ಕೆಳಮಟ್ಟದ ಜನರು ಮಾತ್ರ ಕೃತ್ರಿಮವಾದ ಸಮಾನತೆಯ ಸಾಧನೆಗೆ ತವಕ ಪಡುತ್ತಾರೆಂದು ಆತನು ಹೇಳಿದನು. ಜನತೆಯ ಸ್ವಭಾವಗಳಿಗನುಸರಿಸಿ ಸರಕಾರಗಳೂ ಭಿನ್ನ ಸ್ವರೂಪದ್ದಾಗಿರಬೇಕೆಂಬುದು ಪ್ಲೇಟೋನ ಅಭಿಮತ. ಇವನು ಪ್ರಜಾಪ್ರಭುತ್ವದ ದೋಷಗಳನ್ನು ಎತ್ತಿ ತೋರಿಸಿದನು. ಕೆಲವರ ಆಳಿಕೆಯ ವಿರುದ್ಧವಾಗಿ ಪ್ರಜಾಸತ್ತೆ ತಲೆಯೆತ್ತುವುದೆಂದು ಹೇಳಿದನು. ಪ್ರಜಾಸತ್ತೆಯಲ್ಲಿ ತಲೆದೋರುವ ಅರಾಜಕತೆಯನ್ನು ಸ್ವಾತಂತ್ರ್ಯವೆಂದೂ, ದುಂದುಗಾರಿಕೆಯನ್ನು ವೈಭವವೆಂದೂ, ಅಚಾತುರ್ಯವನ್ನು ಧೈರ್ಯವೆಂತಲೂ ಹೇಳಿ ಸತ್ಯವನ್ನು ರಾಜಕಾರಣಿಗಳು ಮರೆಮಾಚಿಸುವರೆಂದು ಹೇಳಿದ ಪ್ಲೇಟೋನ ಈ ಅಭಿಪ್ರಾಯಗಳ ಸತ್ಯತೆಯನ್ನು ಇಂದಿನ ಪ್ರಜಾಪ್ರಭುತ್ವಗಳಲ್ಲಿಯೂ ಕಂಡುಕೊಳ್ಳಬಹುದು.

ಪ್ರತಿಯೊಂದು ಸರಕಾರ ಪದ್ಧತಿಯು ಅದರ ಮೂಲಭೂತ ತತ್ವಗಳ ಅತಿರೇಕವಾದ ಅನುಷ್ಠಾನದಿಂದಾಗಿಯೇ ಪತನ

ಹೊಂದುತ್ತದೆಂದು ಪ್ಲೇಟೋ ತೋರಿಸಿಕೊಟ್ಟನು. ಈತನು ಬರೆದ "ರಿಪಬ್ಲಿಕ್" ಎಂಬ ಗ್ರಂಥ ಸುಪ್ರಸಿದ್ಧವಾಗಿದೆ. ತತ್ವಜ್ಞಾನಿ-ದೊರೆಯೇ ಸುರಾಜ್ಯ ನಡೆಸಬಲ್ಲನೆಂಬುದು ಪ್ಲೇಟೋನ ಅಭಿಪ್ರಾಯ.

ಅರಿಸ್ಟಾಟಲನ ರಾಜಕೀಯ ವಿಚಾರಗಳು ಅವನ ಗುರುವಾದ ಪ್ಲೇಟೋನ ವಿಚಾರಗಳಿಗಿಂತಲೂ ಭಿನ್ನವಾಗಿದ್ದವು. "ಸ್ವಭಾವತಃ ಮನುಷ್ಯನು ರಾಜಕೀಯ ಪ್ರಾಣಿ" ಎಂದು ರಾಜ್ಯ ಶಾಸ್ತ್ರದ ಜನಕನೆನಿಸಿದ ಅರಿಸ್ಟಾಟಲ್ ಹೇಳಿದನು. "ಜೀವನ ರಕ್ಷಣೆಗಾಗಿ ರಾಜ್ಯ ನಿರ್ಮಾಣಗೊಳ್ಳುತ್ತದೆ ಮತ್ತು ಉತ್ತಮ ಜೀವನದ ಸಾಧನೆಗಾಗಿ ಅದು ಅಸ್ತಿತ್ವದಲ್ಲಿರುತ್ತದೆ" ಎಂಬುದು ಅರಿಸ್ಟಾಟಲನ ಅಭಿಪ್ರಾಯ. ಈತನು ೧೫೮ ರಾಜ್ಯಾಂಗಗಳನ್ನು (Constitutions) ಅಭ್ಯಸಿಸಿ. ಸಮಾನತೆಯ ಹಂಬಲವೇ ರಾಜಕೀಯ ಕ್ರಾಂತಿಗಳ ಪ್ರಮುಖ ಕಾರಣವೆಂದು ಸಾರಿದನು.

ಅರಿಸ್ಟಾಟಲನು ಸರಕಾರಗಳನ್ನು ಈ ರೀತಿ ವಿಂಗಡಿಸಿದನು:— (i) ಸರಿಯಾದ ರೀತಿಯಲ್ಲಿ-ರಾಜಪ್ರಭುತ್ವ, ಶ್ರೀಮಂತರ ಪ್ರಭುತ್ವ (Aristocracy) ಮತ್ತು ಮಧ್ಯಮ ವರ್ಗದವರ ಆಳಿಕೆ (Polity). (ii) ವಿಕೃತ ರೂಪದಲ್ಲಿ ಅನುಕ್ರಮವಾಗಿ—ನಿರಂಕುಶ ಆಳಿಕೆ (Tyranny), ಕೆಲವರ ಆಳಿಕೆ (Oligarchy) ಮತ್ತು ಪ್ರಜಾಸತ್ತೆ (Democracy).

ಇವನು 'ಪಾಲಿಟಿಕ್ಸ್' ಎಂಬ ತನ್ನ ಗ್ರಂಥದಲ್ಲಿ 'ಗ್ರೀಸಿನ ನಗರ-ರಾಜ್ಯಗಳಲ್ಲಿದ್ದ ವಿವಿಧ ಪ್ರಕಾರದ ಸರಕಾರಗಳ ಗುಣ

ಮತ್ತು ದೋಷಗಳನ್ನು ಉಲ್ಲೇಖಿಸಿದ್ದಾನೆ. ಪ್ಲೇಟೋನಂತೆಯೇ ಈತನೂ ಸಹ ಎಲ್ಲ ಪ್ರಕಾರಗಳ ಜನರಿಗೆ ಒಂದೇ ತೆರನಾದ ಸರಕಾರ ಪದ್ಧತಿಯು ಸಲ್ಲದೆಂದು ಅಭಿಪ್ರಾಯಪಟ್ಟನು. ಜನರಲ್ಲಿ ಸದ್ಗುಣ ಮತ್ತು ಸುಖವನ್ನು ತರುವುದೇ ಸರಕಾರದ ಅಂತಿಮ ಧ್ಯೇಯವಾಗಿರಬೇಕೆಂದೂ, ಈ ಧ್ಯೇಯ ಸಾಧನೆಗೆ ಮಧ್ಯಮ ಮಾರ್ಗವನ್ನು ಅನುಸರಿಸಬೇಕೆಂದೂ ಅರಿಸ್ಟಾಟಲ್ ಅಭಿಪ್ರಾಯಪಟ್ಟಿದ್ದಾನೆ. ಗ್ರೀಕರು ಘಟನಾತ್ಮಕತೆಗೆ ಮಹತ್ವ ಕೊಟ್ಟರು. ಈಸೋಕ್ರೇಟಿಸ್ "ರಾಜ್ಯಘಟನೆಯೇ ರಾಜ್ಯದ ಆತ್ಮ" ಎಂದು ಹೇಳಿದರೆ, ಅರಿಸ್ಟಾಟಲನು "ರಾಜ್ಯಘಟನೆಯೇ ರಾಜ್ಯ" ಎಂದು ಹೇಳಿದನು.

ಹೀಗೆ, ಪ್ರಾಚೀನ ಗ್ರೀಕರು ರಾಜಕೀಯ ಪ್ರಯೋಗಗಳಲ್ಲಿ ಹಾಗೂ ರಾಜ್ಯತತ್ವ ಚಿಂತನೆಯಲ್ಲಿ ಗಮನಾರ್ಹವಾದ ಸಾಧನೆ ಮಾಡಿದರು. ಅವರ ಅದ್ವಿತೀಯ ಕೊಡುಗೆಯಾದ ಪ್ರಜಾಸತ್ತೆಯನ್ನು ನಾವು ಯಶಸ್ವಿಯಾಗಿ ಅನುಷ್ಠಾನಕ್ಕೆ ತರಲು ಯತ್ನಿಸುತ್ತಿದ್ದೇವೆ.

## ೩. ವಕ್ತೃತ್ವ ಕಲೆ

ಪ್ರಜಾಸತ್ತಾತ್ಮಕ ಸರಕಾರವು ಚರ್ಚಾ ವಿಧಾನದಿಂದ ನಿರ್ಣಯಗಳನ್ನು ಅಂಗೀಕರಿಸುತ್ತದೆ. ಗ್ರೀಕರ ಪ್ರತ್ಯಕ್ಷ ಪ್ರಜಾಪ್ರಭುತ್ವದಲ್ಲಿ ಸ್ವಾಭಾವಿಕವಾಗಿಯೇ ವಕ್ತೃತ್ವ ಕಲೆಗೆ ಮಹತ್ವ ಬಂದಿತು. ಶಾಲಾ ಶಿಕ್ಷಣ ಕ್ರಮದಲ್ಲಿ ಭಾಷಣ ಕಲೆಗೆ ಮಹತ್ವ ಕಲ್ಪಿಸಲಾಗಿತ್ತು. ಗ್ರೀಕರು ಈ ಕಲೆಯನ್ನು ಪ್ರಯತ್ನ ಪೂರ್ವಕ

ವಾಗಿ ಕರಗತಮಾಡಿಕೊಳ್ಳುತ್ತಿದ್ದರು. ಇದಕ್ಕೆ ಉತ್ತಮ ನಿದರ್ಶನವೆಂದರೆ ಡೆಮೊಸ್ಥನೀಸ್. ಮೊದಮೊದಲು ಗುಕ್ಕಿಸುವ ಸ್ವಭಾವವಿದ್ದ ಈತನು ಸತತ ಅಭ್ಯಾಸದಿಂದ ಶ್ರೇಷ್ಠ ವಾಗ್ಮಿಯಾದನು. ರಾಜಕಾರಣ ಮತ್ತು ನ್ಯಾಯಾಲಯಗಳಲ್ಲಿ ಪ್ರಭಾವ ಮತ್ತು ಪ್ರಸಿದ್ಧಿ ಪಡೆಯುವುದಕ್ಕಾಗಿ ಗ್ರೀಕರು ಭಾಷಣ ಕಲೆಯನ್ನು ಕರಗತಮಾಡಿಕೊಳ್ಳುವುದು ಅಗತ್ಯವಾಗಿತ್ತು. ಸೋಫಿಸ್ಟರೆಂಬ ಪಂಡಿತರು ಜನರಿಗೆ ವಕ್ತೃತ್ವ ಕಲೆಯಲ್ಲಿ ತರಬೇತಿ ಕೊಡುತ್ತಿದ್ದರು. ಸಾಕ್ರೆಟೀಸನು ಚರ್ಚಾ ವಿಧಾನಕ್ಕೆ ಮಹತ್ವ ಕಲ್ಪಿಸಿದನು.

## ೪. ಗ್ರೀಕ್ ಸಾಹಿತ್ಯ

ಅಗಾಧವಾದ ಕೃತುಶಕ್ತಿ ಮತ್ತು ಕಲ್ಪನಾ ಸಾಮರ್ಥ್ಯಗಳಿಂದ ಪ್ರಾಚೀನ ಗ್ರೀಕರು ನಿತ್ಯ ನೂತನವಾಗಿರುವ ಅಮರ ಸಾಹಿತ್ಯ ಕೃತಿಗಳನ್ನು ಸೃಜಿಸಿ, ವಿಶ್ವ ಸಾಹಿತ್ಯವನ್ನು ಅಪಾರವಾಗಿ ಶ್ರೀಮಂತಗೊಳಿಸಿದರು. ಗ್ರೀಕ್ ಸಾಹಿತ್ಯ ಇಡೀ ಪಾಶ್ಚಾತ್ಯ ಜಗತ್ತಿಗೆ ಸ್ಫೂರ್ತಿಯ ಸೆಲೆಯಾಗಿ, ಐರೋಪ್ಯ ಸಾಹಿತ್ಯಾಭಿವೃದ್ಧಿಗೆ ಕಾರಣವಾಗಿದೆ.

ಮಾನವೀಯತೆ, ಸರಳತೆ, ಸ್ವಾಭಾವಿಕತೆ, ತೂಕ ಮತ್ತು ಸಮತೋಲ, ಆದರ್ಶವಾದ ಮತ್ತು ಆನಂದ ಇವು ಗ್ರೀಕರ ಸಾಹಿತ್ಯ ಮತ್ತು ಕಲಾ ಕೃತಿಗಳಲ್ಲಿ ಕಂಡು ಬರುವ ಪ್ರಧಾನ ಲಕ್ಷಣಗಳು. ಗ್ರೀಕ್ ರಾಷ್ಟ್ರೀಯ ಮನಸ್ಸಿನ ಬೆಳವಣಿಗೆಯ ಮೂರು ಹಂತಗಳನ್ನು ಅವರ ಸಾಹಿತ್ಯ ಚರಿತ್ರೆಯಲ್ಲಿ ಕಾಣು

ತ್ತೇವೆ. ಚೇತೋಹಾರಿಯಾದ ಕಥೆಗಳಿಂದ ಕೂಡಿದ ಹೋಮರನ 'ಈಲಿಯಡ್' ಮತ್ತು 'ಒಡಿಸ್ಸೆ' ಎಂಬ ಮಹಾಕಾವ್ಯಗಳು ಗ್ರೀಕ್ ರಾಷ್ಟ್ರೀಯ ಮನಸ್ಸಿನ ಶೈಶವಾವಸ್ಥೆಯನ್ನೂ ವೈಯಕ್ತಿಕ ಭಾವನೆಗಳನ್ನು ಸುಂದರವಾಗಿ, ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುವ ಭಾವಗೀತೆಗಳು ಆ ಮನಸ್ಸಿನ ಯುವ್ವನಾವಸ್ಥೆಯನ್ನೂ, ಜೀವನ ಮತ್ತು ಜಗತ್ತಿನ ಸಮಸ್ಯೆಗಳನ್ನು ಪರಾಮರ್ಶಿಸಿ ಅವುಗಳಿಗೆ ತಕ್ಕ ಪರಿಹಾರಗಳನ್ನು ಸೂಚಿಸುವ ಗ್ರೀಕರ ನಾಟಕಗಳು ಅವರ ಮನಸ್ಸಿನ ಪ್ರಬುದ್ಧಾವಸ್ಥೆಯನ್ನೂ ಪ್ರತಿನಿಧಿಸುತ್ತವೆ.

ಹೋಮರನ ಮಹಾಕಾವ್ಯಗಳು ನಮ್ಮ ರಾಮಾಯಣ ಮತ್ತು ಮಹಾಭಾರತಗಳಂತೆ ಪ್ರಾಚೀನ ವೀರಯುಗದ ಐತಿಹಾಸಿಕ ದರ್ಶನ ನೀಡುತ್ತವೆ. ಹೋಮರನ ಕಾವ್ಯಗಳು ಪ್ರಾಚೀನ ಗ್ರೀಕರಿಗೆ ಪೂಜ್ಯ ಗ್ರಂಥಗಳೂ, ನಿರಂತರ ಸ್ಫೂರ್ತಿ ಕೇಂದ್ರಗಳೂ ಆಗಿದ್ದವು. ಹೋಮರನ ಅಗಾಧವಾದ ಕಲ್ಪನಾ ವಿಲಾಸದ ಮಡಿಲಲ್ಲಿ ಮೂಡಿಬಂದ "ಒಡಿಸ್ಸೆ" ಮಹಾಕಾವ್ಯವು ಭೂಗೋಲ, ಇತಿಹಾಸ, ಕಥೆ ಮತ್ತು ಕಾವ್ಯ ಮುಂತಾದ ವಿವಿಧ ಸ್ವಾರಸ್ಯಗಳ ಸಂಗಮವಾಗಿದ್ದು, ಇದು (ಭಾಷಾಂತರದಲ್ಲಿಯೂ ಸಹ) ಮಕ್ಕಳಿಗೆ ಅತ್ಯುತ್ತಮ ಪಠ್ಯ ಪುಸ್ತಕವಾಗಬಲ್ಲದೆಂದು ಜರ್ಮನ್ ತತ್ವಜ್ಞಾನಿ ಹರ್ಬರ್ಟನು ಶಿಫಾರಸು ಮಾಡಿದ್ದಾನೆ. ಪ್ರಾಚೀನ ಗ್ರೀಕರು ಹೋಮರನ ಕಾವ್ಯಗಳನ್ನು ಕಂಠಪಾಠ ಮಾಡುತ್ತಿದ್ದರು. ಈ ಮಹಾಕಾವ್ಯಗಳು ವರ್ಜಿಲ್, ಡಾಂಟೆ ಮತ್ತು ಮಿಲ್ಟನ್‌ರಂತಹ ಮಹಾಕವಿಗಳಿಗೆ ಅಪಾರ

ಸ್ಫೂರ್ತಿ ನೀಡದವು. ಸುಪ್ರಸಿದ್ಧ ಗ್ರೀಕ್ ಮಹಾಕವಿಗಳಲ್ಲಿ ಹೆಸ್ಯೊಡನ ಹೆಸರು ಜನಜನಿತವಾಗಿದೆ. ಈತನು (ಕ್ರಿ. ಪೂ. ೭೫೦) ರಚಿಸಿದ "ಕೆಲಸಗಳು ಮತ್ತು ದಿವಸಗಳು" ಎಂಬ ಗ್ರಂಥದಲ್ಲಿ ಒಕ್ಕಲಿಗರಿಗೆ ಉಪಯುಕ್ತವಾದ ಸಲಹೆಗಳಿವೆ. ಈ ಕವಿಯು ನೇಗಿಲಯೋಗಿಯ ಬಾಳನ್ನು ಕುರಿತು ಹೃದಯಂಗಮ ವಾಗಿ ಹಾಡಿದ್ದಾನೆ. "ದೇವತೆಗಳ ಅವತರಣ" ಎಂಬ ಇವನ ಇನ್ನೊಂದು ಕೃತಿಯಲ್ಲಿ ದೇವ ಮತ್ತು ಮಾನವರ ಸಂಬಂಧಗಳ ಉಲ್ಲೇಖವಿದೆ.

ಗ್ರೀಕರ ಅನೇಕ ಭಾವಗೀತೆಗಳು ಕಳೆದು ಹೋಗಿವೆ. ಕೆಲವು ಭಾಗಶಃ ಉಳಿದುಕೊಂಡಿವೆ. ಆರ್ಕಿಲೊಕಸ್ (ಕ್ರಿ. ಪೂ. ೭ನೆಯ ಶತಕ) ವೈಯಕ್ತಿಕ ಭಾವನೆ ಮತ್ತು ವಿಚಾರಗಳನ್ನು ಕವನಗಳಲ್ಲಿ ಪರಿಣಾಮಕಾರಿಯಾಗಿ ನಿರೂಪಿಸುವಲ್ಲಿ ಯಶಸ್ವಿ ಯಾದನು. ಸಾಫೋ (ಕ್ರಿ. ಪೂ. ೬ನೆಯ ಶತಮಾನ) ಜಗ ತ್ತಿನ ಶ್ರೇಷ್ಠ ಕವಿಯಿತ್ರಿಯರ ಮಾಲಿಕೆಯಲ್ಲಿ ರಾರಾಜಿಸು ತ್ತಾಳೆ. ಗ್ರೀಸಿನಲ್ಲಿ ಜನರು ಅವಳನ್ನು ತುಂಬ ಗೌರವದಿಂದ ಕಂಡರು; ಆಕೆಯ ಭಾವಗೀತೆಗಳನ್ನು ಮನವಾರೆ ಹೊಗಳಿದರು. ಅನಕ್ರಿಯೊನ್ (ಕ್ರಿ. ಪೂ. ೫೬೦-೪೭೫) ಎಂಬ ಕವಿ ತನ್ನ ಭಾವನೆಗಳನ್ನು ಪ್ರಭಾವಶಾಲಿಯಾಗಿ ನಿರೂಪಿಸಿದನು. ಅವನು ವೈಭವ, ಅಧಿಕಾರ ಅಥವಾ ಸಂಪತ್ತಿಗಾಗಿ ಬಾಯ್ಬಿಡದೆ. ಮಾನ ಸಿಕ ಶಾಂತಿ ಮತ್ತು ಸುಖಗಳನ್ನು ಅಪೇಕ್ಷಿಸಿದನು; ತರುಣ ರನ್ನು ಮತ್ತು ಶೂರರನ್ನು ನಾಶಪಡಿಸಿ ಕೇವಲ ಅಂಜುಬುರು ಕರನ್ನು ಉಳಿಯಗೊಡುವ ಯುದ್ಧಗಳನ್ನು ತಿರಸ್ಕಾರ ದೃಷ್ಟಿ

ಯಿಂದ ನೋಡಿದನು. ಪಿಂಡಾರ್ ಕವಿಯು ಸಮೂಹ ಗೀತೆಗಳನ್ನು ಬರೆದನು. ಸುವಿಖ್ಯಾತನಾದ ಈ ಕವಿಯನ್ನು ಸಮಕಾಲೀನ ಜನರು 'ಗೀತ ದೇವ' (God of song) ಎಂದು ವರ್ಣಿಸಿದರು.

## ೫. ಗ್ರೀಕ್ ನಾಟಕ

ಗ್ರೀಕ್ ಮನಸ್ಸಿನ ನೈಜ ಪರಿಚಯಕ್ಕಾಗಿ ನಾವು ಗ್ರೀಸಿನ ಶ್ರೇಷ್ಠ ನಾಟಕಕಾರರ ಕೃತಿಗಳನ್ನು ಅಭ್ಯಸಸಿಬೇಕು. "ಟ್ರಾಜಡಿ" ಮತ್ತು "ಕಾಮೆಡಿ" ಇವು ಗ್ರೀಕ್ ಶಬ್ದಗಳು ನಾಶವಾಗಿದೆ ಉಳಿದುಕೊಂಡಿರುವ ಗ್ರೀಕ್ ದುಃಖಾಂತ ನಾಟಕಗಳ ಹೆಸರಾಂತ ಕರ್ತೃಗಳು ಈಸ್ಕಿಲಸ್ (ಕ್ರಿ. ಪೂ. ೫೨೫-೪೫೬), ಸಾಫೋಕ್ಲೀಸ್ (ಕ್ರಿ. ಪೂ. ೪೯೫-೪೦೬) ಮತ್ತು ಯುರಿಪಿಡಸ್ (ಕ್ರಿ. ಪೂ. ೪೮೦-೪೦೬).

ಈಸ್ಕಿಲಸ್ ಮಹಾ ನಾಟಕಕಾರನೂ, ಶೂರ ಸೈನಿಕನೂ ಆಗಿದ್ದನು. ಈತನು ಪರ್ಶಿಯನ್ನರ ವಿರುದ್ಧ ಸಲಾಮಿಸ್ ಮತ್ತು ಮ್ಯಾರಥಾನ್ ಕದನಗಳಲ್ಲಿ ಹೋರಾಡಿದನು. 'ಅಗೆಮೆಮ್ನಾನ್' ದಂತಹ ಉತ್ಕೃಷ್ಟ ನಾಟಕಗಳನ್ನು ರಚಿಸಿದನು. ಇವನ ಕೃತಿಗಳಲ್ಲಿ ದೇವತೆಗಳ ನ್ಯಾಯ ದೃಷ್ಟಿಯ ಬಗ್ಗೆ ವಿಶ್ವಾಸ ಭಾವನೆ ವ್ಯಕ್ತವಾಗಿದೆ. ಈತನು ಮಾನವರನ್ನು ದೈವತ್ವದ ಮಟ್ಟದಲ್ಲಿರುವ ಹಾಗೆ ಚಿತ್ರಿಸಿದ್ದಾನೆ. ಈಸ್ಕಿಲಸನು ತನ್ನ ದುಃಖಾಂತ ನಾಟಕಗಳಲ್ಲಿ ಹಾಡಿನ ಅಂಶಕ್ಕಿಂತಲೂ ಹೆಚ್ಚಾಗಿ ಮಾತಿನ ಅಂಶವು ಬರುವಂತೆ ಮಾಡಿದ್ದಾನೆ. "ಪ್ರೊಮಿ

ಥಿಯಿಸ್ ಬೌಂಡ್" ಎಂಬುದು ಇವನ ಇನ್ನೊಂದು ಶ್ರೇಷ್ಠ ನಾಟಕ.

ಸಾಫೋಕ್ಲೀಸ್ ಗ್ರೀಕ್ ನಾಟಕದ ಶ್ರೇಷ್ಠತೆಯ ಪ್ರತೀಕ. ಇವನು ನೂರಕ್ಕೂ ಮಿಕ್ಕಿ ನಾಟಕಗಳನ್ನು ಬರೆದನು. ಸದ್ಯಕ್ಕೆ ಏಳು ನಾಟಕಗಳು ಉಳಿದಿವೆ. 'ಆ್ಯಂಟಿಗಾನ್' ಮತ್ತು 'ಇಲೆಕ್ಟ್ರಾ' ಎಂಬ ನಾಟಕಗಳು ಸುಪ್ರಸಿದ್ಧವಾಗಿವೆ. ಸಾಫೋಕ್ಲೀಸನು ತನ್ನ ನಾಟಕಗಳಲ್ಲಿ ಮನುಷ್ಯರು ಎಂತಹ ಉದಾತ್ತ ಜೀವನ ನಡೆಸಬೇಕೆಂಬುದನ್ನು ತಿಳಿಸಿದ್ದಾನೆ. ಇವನು ಜೀವನವನ್ನು ಸಮಗ್ರ ದೃಷ್ಟಿಯಿಂದ ಪರಿಶೀಲಿಸಿದನು. ಕಷ್ಟ-ನಷ್ಟಗಳ ಅನುಭೋಗದಿಂದ ವ್ಯಕ್ತಿಯ ಚಾರಿತ್ರ್ಯವು ಪರಿಶುದ್ಧವೂ ಉದಾತ್ತವೂ ಆಗುವದೆಂದೂ. ದೇವತೆಗಳ ರೀತಿ ಮತ್ತು ದೃಷ್ಟಿಕೋನಗಳು ಸರಿಯಾದವುಗಳೆಂದೂ ತನ್ನ ನಾಟಕಗಳಲ್ಲಿ ತೋರಿಸಿಕೊಟ್ಟನು. ಮಾನವ ಮತ್ತು ಪರಿಸ್ಥಿತಿಯ ಒತ್ತಡಗಳ (ನಡುವಿನ) ತಾಕಲಾಟವೇ ದುಃಖಕ್ಕೆ ಕಾರಣ ಎಂಬುದು ಇವನ ನಾಟಕಗಳಿಂದ ತಿಳಿದು ಬರುತ್ತದೆ-

ಯುರಿಪಿಡಿಸನು ಯಥಾರ್ಥವಾದಿಯಾಗಿದ್ದ. ತನ್ನ ನಾಟಕಗಳಲ್ಲಿ ಮಾನವರನ್ನು ಅವರು ಇದ್ದಂತೆಯೇ ಚಿತ್ರಿಸಿದ್ದಾನೆ. ಜೀವನದಲ್ಲಿ ದೇವರಿಗಿಂತ ಮನುಷ್ಯರೇ ಮುಖ್ಯರೆಂಬುದು ಇವನ ಅಭಿಪ್ರಾಯ. ತನ್ನ ನಾಟಕಗಳಲ್ಲಿ ಮಾನವನ ಭಾವನೆ, ಮನೋವಿಕಾರಗಳನ್ನು ಪ್ರಧಾನವಾಗಿ ಬಣ್ಣಿಸಿದ್ದಾನೆ. ದೇವತೆಗಳನ್ನು ದುಷ್ಟ ಶಕ್ತಿಗಳೆಂದು ಚಿತ್ರಿಸಿದ್ದಾನೆ. ಇವನು ಜನತೆಗೆ

ನೀತಿ ಶಿಕ್ಷಣ ಕೊಡಲು ಯತ್ನಿಸದೆ, ಜೀವನದಲ್ಲಿಯ ದುಃಖ, ನಷ್ಟ, ಕಳವಳವನ್ನು ನಿರೂಪಿಸಿದ್ದಾನೆ.

ಅರಿಸ್ಟೋಫೇನಿಸ್ ( ಕ್ರಿ. ಪೂ. ೪೪೮-೩೮೫ ) ಶ್ರೇಷ್ಠ ಸುಖಾಂತ ನಾಟಕಕಾರ. ಇವನ ನಾಟಕಗಳಲ್ಲಿ ಅಸಮರ್ಥ ರಾಜಕಾರಣಿಗಳ ಮತ್ತು ಮೂರ್ಖ ಸೇನಾಪತಿಗಳ ವಿಡಂಬನೆ ಬಂದಿದೆ. ಗ್ರೀಕ್ ನಾಟಕಗಳು ಸಾಮಾಜಿಕ ವಿಮರ್ಶೆಯ ಪ್ರಬಲ ಸಾಧನಗಳಾಗಿದ್ದವು. ಅವುಗಳಲ್ಲಿ ನಿರ್ಭಯದ ಮತ್ತು ಧಾರಾಳವಾದ ಜೀವನ ವಿಮರ್ಶೆಯಿತ್ತು. ಅರಿಸ್ಟೋಫೆನಿಸನು ಜನರನ್ನು, ಅವರ ಆಶೆ-ಆಕಾಂಕ್ಷೆಗಳನ್ನು, ಕಷ್ಟ-ನಷ್ಟಗಳನ್ನು ಅನೇಕ ರಾಜಕಾರಣಿಗಳಿಗಿಂತ ಹೆಚ್ಚು ಚೆನ್ನಾಗಿ ಅರಿತಿದ್ದನು. ಸ್ವಾರ್ಥಿಗಳಾಗಿದ್ದ ರಾಜಕಾರಣಿಗಳ ಭ್ರಷ್ಟಾಚಾರಗಳನ್ನು ಬಯಲಿಗೆಳೆಯುತ್ತಿದ್ದನು. ತತ್ಪರಿಣಾಮವಾಗಿ ಕ್ರಿ. ಪೂ. ೪೧೪ ರಲ್ಲಿ ಸುಖಾಂತ ನಾಟಕಗಳಲ್ಲಿ ರಾಜಕೀಯ ಜೀವನದ ಮೇಲೆ ಟೀಕೆ ಬರುವುದನ್ನು ನಿಷೇಧಿಸಲಾಯಿತು.

ಗ್ರೀಕ್ ನಾಟಕಗಳು ಜನರಲ್ಲಿ ನೈತಿಕ ಆದರ್ಶ, ಉಚ್ಚ ಮಟ್ಟದ ಅಭಿರುಚಿ ಮತ್ತು ಆಧ್ಯಾತ್ಮಿಕ ಒಲವು ಹುಟ್ಟಿಸುವ ಪ್ರಭಾವಶಾಲಿ ಸಾಧನಗಳಾಗಿದ್ದವು. ಪೆರಿಕ್ಲೀಸನ ಕಾಲದಲ್ಲಿ ನಾಟಕಕಾರರಿಗೆ ಪ್ರೋತ್ಸಾಹ ದೊರೆಯಿತು. ಅಥೆನ್ಸಿನಲ್ಲಿ ೧೪೦೦೦ ಪ್ರೇಕ್ಷಕರಿಗೆ ಆಸನಗಳುಳ್ಳ ಸಾರ್ವಜನಿಕ ನಾಟಕ ಗೃಹವಿತ್ತು. ಉತ್ತಮ ನಾಟಕಾಭಿನಯದ ವಿಷಯವಾಗಿ ನಾಟಕಕಾರರಲ್ಲಿ ಸ್ಪರ್ಧೆ ಇರುತ್ತಿತ್ತು. ಸರಕಾರ ಮತ್ತು ಶ್ರೀಮಂತರು ನಾಟಕಗಳಿಗೆ ಸಹಾಯಧನ ಒದಗಿಸುತ್ತಿದ್ದರು.

## ೬. ಇತಿಹಾಸ

'ಹಿಸ್ಟರಿ' ಇದು ಗ್ರೀಕ್ ಮೂಲದ ಶಬ್ದ. ವಿಚಾರಣೆ ಅಥವಾ ಜಿಜ್ಞಾಸೆ ಎಂದು ಇದರ ಅರ್ಥ. ಹಿರೋಡೊಟಸ್ (ಕ್ರಿ. ಪೂ. ೪೮೪-೪೨೫) 'ಇತಿಹಾಸದ ಜನಕ' ಎಂದು ಹೆಸರಾಗಿದ್ದಾನೆ. ಇವನು ಗ್ರೀಸಿನ ಮೇಲೆ ನಡೆದ ಪರ್ಶಿಯದ ಆಕ್ರಮಣವನ್ನು ಕುರಿತು ಒಂಬತ್ತು ಗ್ರಂಥಗಳನ್ನು ರಚಿಸಿದನು. ಇವನೊಬ್ಬ ಮಹಾ ಪ್ರವಾಸಿ. ತಾನು ಕಂಡ ಹಾಗೂ ಪರರಿಂದ ಕೇಳಿ ತಿಳಿದುಕೊಂಡ ವಿಷಯಗಳನ್ನು ಆಕರ್ಷಕ ಕಥನ ಶೈಲಿಯಲ್ಲಿ ನಿರೂಪಿಸಿದನು. ಇವನು ಬರೆದುದೆಲ್ಲವೂ ಐತಿಹಾಸಿಕ ಸತ್ಯ ಸಂಗತಿಯಲ್ಲ. ಈ ಮಾತನ್ನು ಹಿರೊಡಟಸನೇ ಒಪ್ಪಿಕೊಂಡಿದ್ದಾನೆ. 'ಭಾರತೀಯರು ತಮ್ಮ ಮಾತಾ-ಪಿತೃಗಳನ್ನೇ ಭಕ್ಷಿಸುತ್ತಾರೆ' ಎಂಬ ಅಸತ್ಯಪೂರ್ಣ ಮಾತನ್ನು ಬರೆದಿದ್ದಾನೆ. ಹಿರೋಡೊಟಸ್ ವಿಮರ್ಶಾತ್ಮಕ ಪ್ರವೃತ್ತಿಯ ಇತಿಹಾಸಕಾರನಾಗಿರಲಿಲ್ಲ. ಇವನು ಒದಗಿಸಿದ ಹಲವು ಐತಿಹಾಸಿಕ ಸಂಗತಿಗಳು ಇತಿಹಾಸಕಾರರಿಗೆ ಉಪಯುಕ್ತವಾಗಿವೆ.

ಹಿರೋಡೊಟಸನ ಕಲಾತ್ಮಕವಾದ ಮತ್ತು ಸುಂದರವಾದ ಕಥನ ಶೈಲಿ, ಉತ್ಸಾಹ ಮತ್ತು ಮೇರೆಯಿಲ್ಲದ ಕೂತೂಹಲತೆ ಈ ಗುಣಗಳು ಶ್ಲಾಘನೀಯವಾದವುಗಳು.

ಪ್ರಾಚೀನ ಗ್ರೀಸಿನ ಅತ್ಯಂತ ಶ್ರೇಷ್ಠ ಇತಿಹಾಸಕಾರ ಥ್ಯೂಸಿಡೈಡಿಸ್ (ಕ್ರಿ.ಪೂ. ೪೬೦-೩೯೯). ಇವನು 'ಪೆಲೊಪೊನೆಸಿಯನ್ ಯುದ್ಧ' ಕುರಿತು ಇತಿಹಾಸ ಗ್ರಂಥ ರಚಿಸಿದನು.

ವಿಚಾರವಾದಿಯಾಗಿದ್ದ ಈ ಇತಿಹಾಸಕಾರನು ಸತ್ಯಕ್ಕೆ ಚ್ಯುತಿ ಯುಂಟಾಗದ ರೀತಿಯಲ್ಲಿ ಘಟನೆಗಳನ್ನು ನಿರೂಪಿಸಿದನು. “ಇತರರಿಂದ ದೊರೆತ ಐತಿಹಾಸಿಕ ಸಾಮಗ್ರಿಯನ್ನೆಲ್ಲ ಕೂಲಂಕಷ ವಾಗಿ ಪರಿಶೀಲಿಸಿದ ನಂತರವೇ ನನ್ನ ಲೇಖನ ಕಾರ್ಯವನ್ನು ಆರಂಭಿಸಿದ್ದೇನೆ” ಎಂದು ಈತನು ಬರೆದಿದ್ದಾನೆ. ಜನರನ್ನು ಮೆಚ್ಚಿಸುವುದಕ್ಕೆ ಸತ್ಯವನ್ನು ಮರೆಮಾಚಿಸಿ, ವಿಷಯಗಳನ್ನು ಅತಿರಂಜಿತವಾಗಿ ಬಣ್ಣಿಸುವ ಇತಿಹಾಸಕಾರರ ಪ್ರವೃತ್ತಿಯನ್ನು ಖಂಡಿಸಿದನು. ‘ನನ್ನ ಕೃತಿಯು ಬಹುಮಾನ ಸ್ಪರ್ಧೆಗಾಗಿ ಬರೆದುದಲ್ಲ; ಅದು ಚಿರಕಾಲ ನಿಲ್ಲುವಂತಹ ಅಮರ ಕೃತಿ’ ಯೆಂದು ಥ್ಯೂಸಿಡೈಡಿಸ್ ಹೇಳಿದ್ದು ಸತ್ಯವೇ ಆಗಿದೆ. ಇವನ ಶೈಲಿಯೂ ಅಪ್ರತಿಮವಾದುದು; ಈತನ ಬಹುಮುಖ ಪ್ರತಿ ಭೆಯೂ ಅನನ್ಯಾದೃಶವಾದುದು. ಅಂತೆಯೇ, ಬ್ರಿಟಿಷ್ ಪಂಡಿತ ನಾದ ಮೆಕಾಲೆ ಥ್ಯೂಸಿಡೈಡಿಸನನ್ನು ಕುರಿತು ಹೀಗೆ ಹೇಳಿ ದ್ದಾನೆ:— “ಇವನಂತಹ ಇತಿಹಾಸಕಾರನು ಈ ವರೆಗೂ ಹುಟ್ಟಿಯೇ ಇಲ್ಲ. ಇಂದಿನ ವರೆಗೆ ಆಗಿ ಹೋದ ಇತಿಹಾಸ ಕಾರರಲ್ಲಿ ಇವನೇ ಅತ್ಯುತ್ತಮ ಇತಿಹಾಸಕಾರನು.”

ಜನೊಫನ್ (ಕ್ರಿ. ಪೂ. ೪೩೪–೩೫೫) ಎಂಬ ಇತಿಹಾಸ ಕಾರನು ಪರ್ಶಿಯದಲ್ಲಿ ನಡೆದ ಗ್ರೀಕ್ ದಂಡಯಾತ್ರೆಯನ್ನು ಕುರಿತು ಅನಾಬಿಸಿಸ್ ಎಂಬ ಗ್ರಂಥ ಬರೆದನು. ಅಲೆಕ್ಸಾಂಡ ರನು ಪರ್ಶಿಯದ ದಿಗ್ವಿಜಯ ಆರಂಭಿಸಲು ಈ ಗ್ರಂಥವೇ ಉತ್ತೇ ಜನ ನೀಡಿತೆಂದು ನಂಬಲಾಗಿದೆ.

## ೭. ಕಲಾರಂಗ

ಪ್ರಾಚೀನ ಗ್ರೀಕರು ಸೌಂದರ್ಯ ಪ್ರೇಮಿಗಳೂ, ಅಸಾಧಾರಣ ಪ್ರತಿಭಾ ಸಂಪನ್ನರೂ ಆಗಿದ್ದರು. ಸೌಂದರ್ಯಾನುಭೂತಿಯಲ್ಲಿ ಪ್ರಾಚೀನ ಗ್ರೀಕರನ್ನು ಮೀರಿಸಿದ ಜನಾಂಗವಿಲ್ಲ. ಕಲೆ ಅವರ ಜೀವನದ ಜೀವಾಳವಾಗಿತ್ತು. ಸತ್ಯ' ಸೌಂದರ್ಯ ಮತ್ತು ಶಿವಂ ಇವುಗಳೆಲ್ಲವೂ ಗ್ರೀಕರಿಗೆ ಒಂದೇ ತತ್ವವಾಗಿತ್ತು. ಈ ತತ್ವದ ಪರಿಪೂರ್ಣತೆಯನ್ನು ತಮ್ಮ ಕಲೆ ಮತ್ತು ಸಾಹಿತ್ಯ ಕೃತಿಗಳಲ್ಲಿ ಸಾಧಿಸಲು ಅವಿರತ ಶ್ರಮಿಸಿದರು. ಸಾಮಾನ್ಯ ಗ್ರೀಕ್ ಪ್ರಜೆಯ ಸೌಂದರ್ಯಪ್ರಜ್ಞೆ ಮತ್ತು ಕಲಾಪ್ರೇಮಗಳು ಉನ್ನತ ಮಟ್ಟದ್ದಾಗಿದ್ದವು. ಗ್ರೀಕ್ ಕಲಾವಿದರ ಶ್ರದ್ಧೆ, ತಾಳ್ಮೆ ಮತ್ತು ಪರಿಪೂರ್ಣತೆಯ ಹಂಬಲಗಳು ಅಪಾರವಾಗಿದ್ದವು. ಉದಾಹರಣೆಗಾಗಿ, ಗ್ರೀಕ್ ಚಿತ್ರಕಾರ ಪ್ರೊಟೊಜಿನಿಸ್ ಒಂದೇ ಚಿತ್ರವನ್ನು ಸೃಷ್ಟಿಸುವುದಕ್ಕೆ ಏಳು ವರ್ಷಗಳ ವರೆಗೆ ಸತತವಾಗಿ ಪರಿಶ್ರಮಿಸಿದನಂತೆ ! ಗ್ರೀಕ್ ಕಲಾವಿದರು ಉತ್ಕೃಷ್ಟವಾದ ಮಾದರಿಗಳನ್ನು ಕೂಲಂಕಷವಾಗಿ ಅಭ್ಯಸಿಸಿದ ನಂತರವೇ ತಮ್ಮ ಕಲಾಕೃತಿಯ ಸೃಷ್ಟಿಗೆ ಮನಸ್ಸು ಮಾಡುತ್ತಿದ್ದರು. ಪ್ರಕೃತಿ ಸೌಂದರ್ಯವು ಗ್ರೀಕರ ಅನುವಂಶಿಕ ಆಸ್ತಿಯ ಭಾಗವಾಗಿದ್ದಿತು.

ಆರಂಭ ಕಾಲದಲ್ಲಿ ಗ್ರೀಕರು ಈಜಿಪ್ಷಿಯನ್ನರ ಮತ್ತು ಈಜಿಯನ್ನರ ಕಲಾ ವೈಶಿಷ್ಟ್ಯಗಳನ್ನು ಎರವಲು ಪಡೆದರು; ಅವುಗಳನ್ನು ತಮ್ಮ ಪ್ರತಿಭೆಯಿಂದ ಪರಿಪೂರ್ಣಗೊಳಿಸಿದರು. ಗ್ರೀಕ್ ಕಸುಬದಾರರು ಕಲಾದೃಷ್ಟಿಯನ್ನೇ ಪ್ರಧಾನವಾಗಿಟ್ಟು ಕೊಂಡಿದ್ದರು. ಎಣ್ಣೆ ಮತ್ತು ಮದ್ಯಗಳನ್ನು ಹಾಕಿಡುವ

ಪಾತ್ರೆಗಳ ಆಕಾರಗಳು ಬಹು ಆಕರ್ಷಕವಾಗಿದ್ದವು. ತಿಗುರಿಯ ಮೇಲೆ ತಯಾರಿಸಿದ ಹೂಜೆಗಳ ಮೇಲೆ ಕಲಾವಿದರು ಮನ ಮೋಹಕವಾದ ಚಿತ್ರ ಮತ್ತು ವಿನ್ಯಾಸಗಳನ್ನು ಮೂಡಿಸುತ್ತಿದ್ದರು. ಗ್ರೀಕ್ ಚಿತ್ರಕಲೆಯ ಉತ್ಕೃಷ್ಟ ಮಾದರಿಗಳು ಅವರ ಹೂಜೆಗಳ ಮೇಲೆ ಕಂಡು ಬರುತ್ತವೆ. ಕ್ರಿ. ಪೂ. ಐದನೆಯ ಶತಮಾನದಲ್ಲಿ ಗ್ರೀಕ್ ಚಿತ್ರಕಲೆ ತನ್ನ ಶ್ರೇಷ್ಠ ಮಟ್ಟವನ್ನು ಹೊಂದಿತ್ತು, ಥ್ರೇಸಿನ ಪಾಲಿನಾಟಸ್ ಅನೇಕ ಸಮೂಹ ಚಿತ್ರಗಳನ್ನು ತೆಗೆದನು. ಅಪೊಲೊಡರಸ್ (ಕ್ರಿ ಪೂ. ೪ ನೆಯ ಶತಕ) ಹೊಜೆ ಮತ್ತು ಗೋಡೆಗಳ ಬದಲಾಗಿ ಮರದ ಪಟ್ಟಿಗಳ ಮೇಲೆ ಚಿತ್ರಗಳನ್ನು ಬರೆಯಲಾರಂಭಿಸಿದನು. ವಾಸ್ತವಿಕತೆ ಮತ್ತು ಸೌಂದರ್ಯ ಗ್ರೀಕ್ ಚಿತ್ರಕಲೆಯ ವೈಶಿಷ್ಟ್ಯಗಳು.

ಗ್ರೀಕರು ತಮ್ಮ ದೇವತೆಗಳಿಗಾಗಿ ಭವ್ಯ ಮಂದಿರಗಳನ್ನು ನಿರ್ಮಿಸಿದರು. ಆದರೆ ಈ ಜನರ ವಸತಿ ಗೃಹಗಳು ಸುಂದರವಾಗಿರಲಿಲ್ಲ; ಅನುಕೂಲತೆಗಳನ್ನು ಹೊಂದಿರಲಿಲ್ಲ. ದೇವತೆಗಳಿಗೆ ತಮ್ಮ ಆದರಭಾವ ಮತ್ತು ಕೃತಜ್ಞತೆಯನ್ನು ತೋರಿಸುವುದಕ್ಕಾಗಿ ಗ್ರೀಕರು ಅತ್ಯಂತ ಸುಂದರವಾದ ಮತ್ತು ಭವ್ಯವಾದ ದೇವಾಲಯಗಳನ್ನು ನಿರ್ಮಿಸಿದರು. ಅವುಗಳ ನಿರ್ಮಾಣಕ್ಕೆ ಎಂತಹ ಕಠೋರವಾದ ಶ್ರಮ ಮತ್ತು ಅಪಾರ ವೆಚ್ಚಕ್ಕೂ ಅವರು ಸಿದ್ಧರಿದ್ದರು. ಮೊದಮೊದಲು ಕಟ್ಟಿಗೆಯಿಂದ ದೇವಾಲಯಗಳನ್ನು ರಚಿಸುತ್ತಿದ್ದರು. ನಂತರ ಇಟ್ಟಿಗೆಗಳಿಂದ ಮತ್ತು ಸಂಗಮರವರೀ ಕಲ್ಲಿನಿಂದ ಮಂದಿರಗಳನ್ನು ಕಟ್ಟಿದರು. ಡೋರಿಕ್, ಅಯೊನಿಯನ್ ಮತ್ತು ಕೊರಿಂಥಿಯನ್ ಎಂಬ

ಮೂರು ಶೈಲಿಗಳಲ್ಲಿ ಕ್ರಮವಾಗಿ ಗ್ರೀಕ್ ವಾಸ್ತುಶಿಲ್ಪವು ಅಭಿವೃದ್ಧಿ ಹೊಂದಿತು. ಗ್ರೀಕ್ ಕಟ್ಟಡಗಳಿಗೆ ಕಂಬಗಳ ಸಾಲಿನಿಂದ ವಿಶಿಷ್ಟ ಸೌಂದರ್ಯ ಲಭಿಸಿತು. ಡೋರಿಕ್ ಮಾದರಿಯ ಕಂಬಗಳು ಸಾದಾ ಹಾಗೂ ಸ್ಥೂಲ ಆಕಾರದ್ದಾಗಿದ್ದುವು. ಇಕ್ಟಿನಸ್ ಎಂಬ ವಾಸ್ತು ಶಿಲ್ಪಿಯು ಅಥೆನ್ಸಿನ ಪಾರ್ಥೆನಾನ್ ದೇವಾಲಯವನ್ನು ಡೋರಿಕ್ ಮಾದರಿಯಲ್ಲಿ ನಿರ್ಮಿಸಿದನು. ಹಿತ-ಮಿತವಾದ ಪ್ರಮಾಣಬದ್ಧತೆ ಮತ್ತು ದೋಷರಹಿತ ಗುಣಗಳಿಂದ ಕೂಡಿದ ಪಾರ್ಥೆನಾನ್ ದೇವಾಲಯ ಅತ್ಯಂತ ಪರಿಪೂರ್ಣವಾದ ದೇವಾಲಯ ವಾಸ್ತುಶಿಲ್ಪದ ಮಾದರಿಯೆಂದು ಪರಿಗಣಿಸಲ್ಪಟ್ಟಿದೆ. ಕೆನೆ ಬಿಳಿ ಬಣ್ಣದ ಅಮೃತ ಶಿಲೆಯಲ್ಲಿ ನಿರ್ಮಾಣಗೊಂಡ ಭವ್ಯ ಪಾರ್ಥೆನಾನ್ ಮಂದಿರವು ಸ್ವಚ್ಛ ನೀಲಾಕಾಶದ ಹಿನ್ನೆಲೆಯಲ್ಲಿದ್ದು, ನೋಟಕರ ಕಂಗಳಿಗೆ ಹಬ್ಬವನ್ನುಂಟು ಮಾಡುತ್ತಿತ್ತು.

ಗ್ರೀಕ್ ನಗರ-ರಾಜ್ಯಗಳಲ್ಲಿ ಮೂರ್ತಿ ಶಿಲ್ಪಿಗಳಿಗೆ ಅತ್ಯಂತ ಗೌರವದ ಸ್ಥಾನವಿದ್ದಿತು. ಮಾನವ ಶರೀರದ ಸೌಂದರ್ಯವನ್ನು ಆದರ್ಶವಾಗಿಟ್ಟುಕೊಂಡಿದ್ದ ಗ್ರೀಕ್ ಶಿಲ್ಪಿಗಳು ಅದನ್ನು ಉತ್ಕೃಷ್ಟ ರೀತಿಯಲ್ಲಿ ಅಭಿವ್ಯಕ್ತಗೊಳಿಸಲು ಯತ್ನಿಸಿದರು. ದೇವತೆಗಳಿಗೂ ಮಾನವ ಶರೀರವೇ ಇರುವುದೆಂದು ಅವರು ತಿಳಿದಿದ್ದರು. ಆದ್ದರಿಂದ ಮಾನವರ ಮತ್ತು ದೇವತೆಗಳ ಪ್ರತಿಮೆಗಳನ್ನು ಅತ್ಯಂತ ಪ್ರಮಾಣಬದ್ಧವಾಗಿ ರೂಪಿಸುತ್ತಿದ್ದರು. ಆ ಮೂರ್ತಿಗಳಲ್ಲಿ ಜೀವಕಳೆ, ಭಾವ ನಿರೂಪಣೆ ಮತ್ತು ಪ್ರಶಾಂತ ಗಂಭೀರತೆಗಳು ಎದ್ದು ತೋರುತ್ತವೆ. ಪೆರಿಕ್ಲೀಸನ ಮಿತ್ರನಾಗಿದ್ದ

ಫಿಡಿಯಸ್ ಶ್ರೇಷ್ಠ ಶಿಲ್ಪಿಯಾಗಿದ್ದನು. ಪಾರ್ಥೆನಾನ್ ದೇವಾಲಯದಲ್ಲಿ ಅಮರ ಶಿಲ್ಪ ಕಲಾಕೃತಿಗಳನ್ನು ನಿರ್ಮಿಸಿದವನು ಫಿಡಿಯಸ್. ಇವನು ಚಿತ್ರಕಾರನೂ ಆಗಿದ್ದನು. ಪ್ರಾಕ್ಸಿಟೇಲಸ್‌ನು ವೈಯಕ್ತಿಕ ಪ್ರತಿಮೆಗಳನ್ನು ಕಡೆಯುವದರಲ್ಲಿ ಪ್ರವೀಣನಾಗಿದ್ದನು. ಇವನು ತಯಾರಿಸಿದ ಕ್ರೀಡಾ ಪಟುವಿನ ಪ್ರತಿಮೆಯು ಶಾರೀರಕ ಸೌಂದರ್ಯ ಮತ್ತು ಪ್ರಮಾಣಬದ್ಧತೆಗಳಿಗೆ ಮಾದರಿಯೆನಿಸಿತ್ತು.

ಗ್ರೀಕರು ಸಹಜತೆ ಮತ್ತು ಸರಳತೆಯ ಮೂಲಕ ಸೌಂದರ್ಯವನ್ನು ದಿಗ್ದರ್ಶಿಸಿದರು. ಅವರ ನಿತ್ಯ ಜೀವನ ಕ್ರಮವೂ ತೀರ ಸಾದಾ ರೀತಿಯದಾಗಿತ್ತು. ಗ್ರೀಕರ ದೇವಾಲಯಗಳಲ್ಲಿ ಮತ್ತು ಶಿಲ್ಪ ಕಲಾಕೃತಿಗಳಲ್ಲಿ ಅನವಶ್ಯಕವಾದ ಅಲಂಕಾರಕ್ಕೆ ಎಡೆಯಿರಲಿಲ್ಲ. ಸಹಜತೆ, ಸರಳತೆ, ಸೌಂದರ್ಯ ಮತ್ತು ಪ್ರಮಾಣಬದ್ಧತೆಗಳು ಗ್ರೀಕ್ ಕಲೆಯ ಮುಖ್ಯ ವೈಶಿಷ್ಟ್ಯಗಳು.

## ೮. ಗ್ರೀಕ್ ತತ್ವಜ್ಞಾನ

'ಫಿಲಾಸಫಿ' ಗ್ರೀಕ್ ಶಬ್ದ. ಪ್ರಾಚೀನ ಗ್ರೀಸು ಸಾಕ್ರೆಟೀಸ್, ಪ್ಲೇಟೊ ಮತ್ತು ಅರಿಸ್ಟಾಟಲರಂತಹ ಮಹಾ ತತ್ವಜ್ಞಾನಿಗಳಿಗೆ ಜನ್ಮವಿತ್ತು, ಜಗತ್ತಿಗೆ ಅಪಾರ ಉಪಕಾರಗೈದಿದೆ.

ಸಾಕ್ರೆಟೀಸನ ಕಾಲಕ್ಕಿಂತ ಹಿಂದೆಯೇ ಅನೇಕ ಪಂಡಿತರು ಜಗತ್ತಿನ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳಲು ಯತ್ನಿಸಿದರು. ಯಾವುದು ಅಸ್ತಿತ್ವದಲ್ಲಿದೆ? ಪರಿವರ್ತನೆ ಹೇಗೆ ಸಂಭವಿಸುತ್ತದೆ? –ಎಂಬೀ ಪ್ರಶ್ನೆಗಳಿಗೆ ಉತ್ತರ ಕಾಣಲು ಪ್ರಯತ್ನಗಳು

ನಡೆದುವು. ದೇವತೆಗಳು ಇರುವುದಾಗಿಯೂ, ಅವರು ತಮ್ಮ ಇಚ್ಛಾಮಾತ್ರದಿಂದ ಈ ವಿಶ್ವದಲ್ಲಿ ಬದಲಾವಣೆಗಳನ್ನುಂಟು ಮಾಡಬಲ್ಲರೆಂದು ಮಹಾಕವಿ ಹೋಮರ್ ನಂಬಿದ್ದನು. ಕೆಲವರು ಈ ಭೌತಿಕ ಜಗತ್ತಿನ ಉಗಮವನ್ನು ಸ್ವಾಭಾವಿಕವಾದ ಮತ್ತು ವಿಚಾರ ಶೀಲತೆಯ ತಳಹದಿಯ ಮೇಲೆ ಅರ್ಥೈಸಲು ಯತ್ನಿಸಿದರು. ಹೀಗೆ ವೈಚಾರಿಕ ಪ್ರವೃತ್ತಿಯು ತಲೆದೋರಿತು. ಅದು ಮುಂದೆ ವೈಜ್ಞಾನಿಕ ಸಂಶೋಧನೆಯ ಅಡಿಪಾಯವಾಗಿ ಪರಿಣಮಿಸಿತು.

ಸ್ವತಂತ್ರ ವಿಚಾರ ಪ್ರವೃತ್ತಿ ಪ್ರಾಚೀನ ಗ್ರೀಕರು ಮಾನವ ನಾಗರಿಕತೆಗೆ ಕೊಟ್ಟ ಮಹಾನ್ ಕೊಡುಗೆ. ಇದು ಮಾನವ ಪ್ರಗತಿ ಪಥದಲ್ಲಿ ಒಂದು ಮಹತ್ವದ ಹೆಜ್ಜೆ. ಪ್ರಾಚೀನ ಗ್ರೀಕರು ಸ್ವತಂತ್ರ ವಿಚಾರಪರತೆ ಮತ್ತು ಚರ್ಚಾವಿಧಾನದ ಪುರಸ್ಕರ್ತರು.

“ಗ್ರೀಕರ ವಿಚಾರ ಸ್ವಾತಂತ್ರ್ಯವು (freedom of thought) ಅವರ ತತ್ವಜ್ಞಾನ, ವಿಜ್ಞಾನ, ಕಲೆ, ಸಾಹಿತ್ಯ ಮತ್ತು ರಾಜಕಾರಣ ಮುಂತಾದ ಕ್ಷೇತ್ರಗಳಲ್ಲಿಯ ಅನುಪಮ ಪ್ರಗತಿಗೆ ಮೂಲ ಕಾರಣ” ಎಂದು ಜೆ. ಬಿ. ಬ್ಯೂರಿ ಹೇಳಿದ್ದಾರೆ.

ಏಶಿಯಾ ಮೈನರಿನಲ್ಲಿಯ ಅಯೋನಿಯಾ ಸ್ವತಂತ್ರ ವಿಚಾರವಾದದ ನೆಲೆವೀಡಾಗಿತ್ತು. ಅಲ್ಲಿಯ ತತ್ವಜ್ಞಾನಿಗಳು ಗೊಡ್ಡು ಸಂಪ್ರದಾಯ ಮತ್ತು ಮೂಢ ನಂಬಿಕೆಗಳನ್ನು ಖಂಡಿಸಿದರು.

ಹಿರಾಕ್ಲಿಟಸ್ ಎಂಬವನು ನಮ್ಮ ಜಗತ್ತಿನಲ್ಲಿರುವ ಜಡ ವಸ್ತುಗಳೆಲ್ಲವೂ ಅಶಾಶ್ವತವೂ, ಪರಿವರ್ತನಶೀಲವೂ ಆಗಿವೆ ಯೆಂದು ಸಾರಿದನು. ಡೆಮೊಕ್ರೈಟಸನು ವಿಶ್ವದ ಅಣು ಸಿದ್ಧಾಂತವನ್ನು ಮಂಡಿಸಿದನು.

ಕ್ರಿ. ಪೂ. ೫ನೆಯ ಶತಮಾನದ ಮಧ್ಯಭಾಗದ ನಂತರ "ಸೋಫಿಸ್ಟ" ಎಂಬ ಪಂಡಿತರು ಗ್ರೀಸಿನಲ್ಲೆಲ್ಲ ಸಂಚರಿಸಿ ವಿವಿಧ ವಿಷಯಗಳ ಬಗೆಗೆ ಜ್ಞಾನ ಪ್ರಸಾರ ಮಾಡಿದರು. ಅವರು ವಿಚಾರಶೀಲತೆ ಮತ್ತು ಚರ್ಚೆಗಳಿಗೆ ಮಹತ್ವ ಕಲ್ಪಿಸಿದರು. ಅವರಲ್ಲಿ ಮೇಧಾವಿಗಳಾದವರು ಭಾಷೆ, ತರ್ಕಶಾಸ್ತ್ರ ಮತ್ತು ಜ್ಞಾನದ ಸ್ವರೂಪ ಇವುಗಳ ಬಗ್ಗೆ ಆಳವಾದ ಅಭ್ಯಾಸ ನಡೆಸಿದರು.

ಆಥೆನ್ಸ್‌ನಲ್ಲಿ ಪ್ರತ್ಯಕ್ಷ ಪ್ರಜಾಸತ್ತೆ ಪರಿಪಕ್ವಗೊಂಡ ಕಾಲ ದಲ್ಲಿ ಸಂಪೂರ್ಣ ಸ್ವತಂತ್ರವಾದ ರಾಜಕೀಯ ಚರ್ಚೆಗಳು ನಡೆಯುತ್ತಿದ್ದವು. ಅನೆಕ್ಸಗೊರಸನೆಂಬ ತತ್ವಜ್ಞಾನಿಯು ಪೆರಿ ಕ್ಲೀಸನ ಆತ್ಮೀಯ ಮಿತ್ರನಾಗಿದ್ದ.

**ಸಾಕ್ರೆಟೀಸ್ (ಕ್ರಿ. ಪೂ. ೪೭೦-೩೯೯) :** ಡೆಲ್ಫಿಯ ಅಪೋಲೋ ದೇವಾಲಯದ ಗೋಡೆಯೊಂದರ ಮೇಲೆ ಬರೆಯ ಲಾಗಿದ್ದ "ನಿನ್ನನ್ನು ನೀನು ಅರಿತುಕೊ" (Know Thyself) ಎಂಬ ಮಹಾ ವಾಕ್ಯವು ಸಾಕ್ರೆಟೀಸನಲ್ಲಿ ಜ್ಞಾನ ದೀವಿಗೆಯನ್ನು ಹೊತ್ತಿಸಿತು. ಈ ವಾಕ್ಯದ ಸತ್ಯವನ್ನು ಅರಿತ ಸಾಕ್ರೆಟೀಸನು "ಆತ್ಮ ಜ್ಞಾನವೇ ನಿಜವಾದ ಜ್ಞಾನ" ಎಂದು ಇತರರಿಗೆ ಬೋಧಿ

ಸಿದನು; ಜ್ಞಾನವೇ ಸದ್ಗುಣಕ್ಕೆ ಮಾರ್ಗ ಮಾಡಿಕೊಡುವು ದೆಂದೂ ಸಾರಿದನು.

ಸಾಕ್ರೆಟೀಸನು ಅಂಧಶ್ರದ್ಧೆ, ಆಧಾರ ರಹಿತ ನಂಬಿಕೆ, ಅನೇಕ ದೇವತಾರಾಧನೆಗಳನ್ನು ಖಂಡಿಸಿದನು. ತರ್ಕ ಬದ್ಧ ವಲ್ಲದ ಯಾವ ಹೇಳಿಕೆ, ನಂಬಿಕೆ ಅಥವಾ ಅಭಿಪ್ರಾಯಗಳನ್ನು ಈತನು ಒಪ್ಪುತ್ತಿರಲಿಲ್ಲ. ಎಲ್ಲವನ್ನೂ ವಿಚಾರದ ಒರೆಗಲ್ಲಿಗೆ ಹಚ್ಚಿ, ಸರಿಯೆನಿಸಿದ್ದನ್ನು ಮಾತ್ರ ಸ್ವೀಕರಿಸುತ್ತಿದ್ದನು. ಸಾಕ್ರೆಟೀಸ್ ಮಹಾ ಪ್ರಶ್ನೆಕಾರನಾಗಿದ್ದ. ಇತರರಿಗೆ ಪದೇ ಪದೇ ಪ್ರಶ್ನೆಗಳನ್ನು ಹಾಕಿ, ಅವರು ಕೊಟ್ಟ ಉತ್ತರಗಳಿಂದಲೇ ಅವರ ಜ್ಞಾನಶೂನ್ಯತೆಯನ್ನೂ, ಅವರ ನಂಬಿಕೆಗಳ ಅರ್ಥಹೀನತೆ ಯನ್ನೂ ಮನಗಾಣಿಸಿಕೊಡುತ್ತಿದ್ದನು. ವಿಷಯಗಳನ್ನು ತಿಳಿಸಿ ಕೊಡಲು ಚರ್ಚಾ ವಿಧಾನವನ್ನು ಅನುಸರಿಸಿ, ಇತರರಿಗೆ ವಿಮ ರ್ಶಾತ್ಮಕ ಪ್ರವೃತ್ತಿಯನ್ನು ಕಲಿಸಿದನು. ಮಾನಸಿಕ ತರಬೇತಿಗೆ ಪ್ರಾಶಸ್ತ್ಯ ನೀಡುವ ಶಿಕ್ಷಣ ಪದ್ಧತಿ ಅವಶ್ಯವೆಂದು ಈತನು ಪ್ರತಿಪಾದಿಸಿದನು.

ಸಾಕ್ರೆಟೀಸನ ತರ್ಕಬದ್ಧ ವಿಚಾರಸರಣಿ ಕೆಲವರಿಗೆ ಸರಿ ಬರಲಿಲ್ಲ. ಇವನ ಕೆಲವು ವೈರಿಗಳು "ಅಥೆನ್ಸಿನ ತರುಣ ಪೀಳಿ ಗೆಯನ್ನು ನಾಸ್ತಿಕತೆಯ ತಪ್ಪು ದಾರಿಗೆಳೆಯುವನು" ಎಂಬ ಆರೋಪವನ್ನು ಸಾಕ್ರೆಟೀಸನ ಮೇಲೆ ಹೊರಿಸಿದರು. ಅಥೆನ್ಸಿನ ನ್ಯಾಯ ಪಂಚಾಯಿತಿಯು ಸಾಕ್ರೆಟೀಸನಿಗೆ ಮರಣ ದಂಡನೆ ಕೊಟ್ಟಿತು. ಮನಸ್ಸು ಮಾಡಿದ್ದರೆ ಈತನು ತಪ್ಪಿಸಿಕೊಂಡು

ಓಡಿ ಹೋಗಬಹುದಾಗಿತ್ತು. ಆದರೆ ಕಾನೂನು ಪರಿಪಾಲನೆಗೆ ಬದ್ಧನೂ ಸತ್ಯಕ್ಕಾಗಿ ಸಾವನ್ನಪ್ಪಲೂ ಹಿಂಜರಿಯದ ಧೀರ ಸಾಕ್ರೆಟೀಸ್ ಶಾಂತಚಿತ್ತದಿಂದ ಹೆಮ್‌ಲಾಕ್ ವಿಷಪಾನ ಮಾಡಿದನು. ತತ್ವಜ್ಞಾನ ರಂಗಕ್ಕೆ ಅಪೂರ್ವ ಕಾಣಿಕೆಗಳನ್ನು ಸಲ್ಲಿಸಿದ ಸಾಕ್ರೆಟೀಸ್ ಅಂದಿಗಿಂತಲೂ ಇಂದು ಹೆಚ್ಚು ಪ್ರಸಿದ್ಧನಾಗಿದ್ದಾನೆ. ಇವನ ಶಿಷ್ಯರಲ್ಲಿ ಪ್ಲೇಟೋ ಮತ್ತು ಜೆನೊಫನ್ ಪ್ರಮುಖರು.

**ಪ್ಲೇಟೋ** (ಕ್ರಿ. ಪೂ. ೪೨೭ – ೩೪೭): ಇವನು ಶ್ರೇಷ್ಠ ಗುರುವಿನ ಅತಿ ಶ್ರೇಷ್ಠ ಶಿಷ್ಯನು. ಯುರೋಪಿಯನ್ನರು ಇವನನ್ನು "ತತ್ವಜ್ಞಾನದ ಜನಕ" ಎಂದು ಕರೆದಿದ್ದಾರೆ. ಪ್ಲೇಟೋನ ಶಿಷ್ಯ ಅರಿಸ್ಟಾಟಲನು "ವಿಜ್ಞಾನದ ಜನಕ" ಎಂದು ಹೆಸರಾಗಿದ್ದಾನೆ. ಪ್ಲೇಟೋ ಆದರ್ಶವಾದಿಯಾಗಿದ್ದ. ನೈತಿಕ ಜೀವನಕ್ಕೆ ಮಹತ್ವ ಕೊಟ್ಟನು. ಜನರನ್ನು ನೀತಿವಂತರನ್ನಾಗಿ ಮಾಡುವುದು ಧರ್ಮದ ಪ್ರಧಾನ ಕಾರ್ಯವೆಂದು ಹೇಳಿದನು. ಇವನು ಬರೆದ ಅನೇಕ ಸಂಭಾಷಣೆಗಳಲ್ಲಿ [Dialogues] 'ರಿಪಬ್ಲಿಕ್' ಮತ್ತು 'ಲಾಸ್' [Laws] ಬಹು ಮಹತ್ವದ್ದಾಗಿವೆ. ಇವುಗಳಲ್ಲಿ ಪ್ಲೇಟೋ ತನ್ನ ಆದರ್ಶ ಸಮಾಜದ ಕಲ್ಪನೆ ಕೊಟ್ಟಿದ್ದಾನೆ; ಅಂತಹ ಸಮಾಜದಲ್ಲಿ 'ತತ್ವಜ್ಞಾನಿ - ದೊರೆ' ಮಾತ್ರ ಸುರಾಜ್ಯ ತರಬಲ್ಲನೆಂದು ಹೇಳಿದ್ದಾನೆ. ಪ್ಲೇಟೋ ಸ್ಥಾಪಿಸಿದ್ದ "ಅಕ್ಯಾಡೆಮಿ" ಎಂಬ ಶಿಕ್ಷಣ ಸಂಸ್ಥೆ ಎಂಟು ನೂರು ವರ್ಷಗಳ ಕಾಲ ಬಾಳಿತು. "ಸದ್ಗುಣಗಳಿಂದ

ಕೂಡಿದ ಜೀವನವೇ ಸುಖೀ ಜೀವನ" ಎಂದು ಪ್ಲೇಟೋ ಸಾರಿದನು.

ಅರಿಸ್ಟಾಟಲ್ (ಕ್ರಿ. ಪೂ. ೩೮೪-೩೨೨): ಪ್ಲೇಟೋ ಕವಿ ಮತ್ತು ತತ್ವಜ್ಞಾನಿಯಾಗಿದ್ದರೆ, ಇವನ ಶ್ರೇಷ್ಠ ಶಿಷ್ಯ ಅರಿಸ್ಟಾಟಲನು ತತ್ವಜ್ಞಾನಿಯೂ ವಿಜ್ಞಾನಿಯೂ ಆಗಿದ್ದನು. ಪ್ಲೇಟೋ ಉದಾತ್ತ ಆದರ್ಶಗಳ ಪ್ರತೀಕವಾಗಿದ್ದರೆ, ಅವನ ಶಿಷ್ಯ ಅರಿಸ್ಟಾಟಲನು ವಾಸ್ತವಿಕ ದೃಷ್ಟಿಕೋನ ಮತ್ತು ಬಹುಮುಖ ಪ್ರತಿಭೆಗೆ ಇನ್ನೊಂದು ಹೆಸರು. ಇವನಲ್ಲಿ ಸಾಕ್ರೆಟೀಸನ ಸತ್ಯಾನ್ವೇಷಕ ಪ್ರಜ್ಞೆಯೂ, ವಿಜ್ಞಾನಿಯ ವಾಸ್ತವಿಕ ದೃಷ್ಟಿಕೋನವೂ ಸಮ್ಮಿಳಿತವಾಗಿದ್ದವು. ಅರಿಸ್ಟಾಟಲನು ವಿಚಾರ ಮಾಡದೆ ಇದ್ದ ವಿಷಯವಿಲ್ಲ. ಚಲಿಸುವ ವಿಶ್ವವಿದ್ಯಾಲಯದಂತಿದ್ದ ಅರಿಸ್ಟಾಟಲ್ ತರ್ಕ, ನೀತಿ, ರಾಜ್ಯಶಾಸ್ತ್ರ, ಆಧ್ಯಾತ್ಮ, ಮಾನಸ ಶಾಸ್ತ್ರ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ, ಕಾವ್ಯ, ಬರೆಹ ಮತ್ತು ಲೇಖನ ಕಲೆ - ಈ ಎಲ್ಲ ವಿಷಯಗಳ ಮೇಲೆ ಪ್ರಮಾಣಭೂತ ಗ್ರಂಥಗಳನ್ನು ಬರೆದನು. ಇವುಗಳಲ್ಲಿ ಅನೇಕ ಗ್ರಂಥಗಳು ಇಂದಿಗೂ ಪಠ್ಯ ಪುಸ್ತಕಗಳಾಗಿವೆ. "ಇವನಿಗಿಂತ ಮೊದಲಾಗಲಿ, ನಂತರವಾಗಲಿ ಯಾವ ಮನುಷ್ಯನು ಇವನಂತೆ ಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ಕೃಷಿ ಮಾಡಿಲ್ಲ" ಎಂದು ಲಿವಿಂಗಸ್ಟನ್ ಹೇಳಿದ್ದಾರೆ. ಮಧ್ಯಯುಗದಲ್ಲಿ ಜನರು ಅರಿಸ್ಟಾಟಲನನ್ನು "ಬಲ್ಲವರ ತಂದೆ" ಎಂದು ವರ್ಣಿಸುತ್ತಿದ್ದರು.

ಅರಿಸ್ಟಾಟಲನು ಮೊಟ್ಟ ಮೊದಲ ಬಾರಿಗೆ ವಾಸ್ತವಾಂಶ

ಗಳ ಸಂಗ್ರಹ ಮತ್ತು ಶಾಸ್ತ್ರೀಯ ವರ್ಗೀಕರಣ ಪದ್ಧತಿಯನ್ನು ಆರಂಭಿಸಿದನು.

ಎಪಿಕ್ಯೂರಸ್ ಎಂಬ ತಾತ್ವಿಕನು ಮನಸ್ಸಿನಲ್ಲಿಯ ಭೀತಿಯನ್ನು ತೊಲಗಿಸಬೇಕೆಂದು ಬೋಧಿಸಿದನು; ಧರ್ಮವು ಭೀರುತನದ ತಳಪಾಯದ ಮೇಲೆ ನಿಂತಿದೆಯೆಂದು ಅಭಿಪ್ರಾಯಪಟ್ಟನು.

ಒಟ್ಟಿನಲ್ಲಿ, ಗ್ರೀಕ್ ತತ್ವಜ್ಞಾನಿಗಳು ವಿಚಾರ ಸ್ವಾತಂತ್ರ್ಯ, ಸತ್ಯಾನ್ವೇಷಣೆ, ವೈಜ್ಞಾನಿಕ ಮನೋವೃತ್ತಿ, ನೈತಿಕ ಜೀವನ, ಜ್ಞಾನತೃಷ್ಣೆ, ಆತ್ಮಜ್ಞಾನ ಇವುಗಳಿಗೆ ಮಹತ್ವ ಕೊಟ್ಟರು.

## ೯. ವಿಜ್ಞಾನ ರಂಗ

ಪ್ರಾಚಿನ ಗ್ರೀಕರು ವಿಚಾರಶೀಲರೂ, ವೈಜ್ಞಾನಿಕ ಮನೋವೃತ್ತಿಯುಳ್ಳವರೂ ಆಗಿದ್ದರು. ಗಣಿತ, ಭೂಮಿತಿ ಶಾಸ್ತ್ರಗಳಲ್ಲಿಯ ಅವರ ಪ್ರತಿಭೆ ಮಿಗಿಲಾದುದು. ಆದರ್ಶವಾದಿಯಾಗಿದ್ದ ಪ್ಲೇಟೋ ಸಹ ಗಣಿತ ಶಾಸ್ತ್ರಕ್ಕೆ ತನ್ನ ಕಾಣಿಕೆ ಸಲ್ಲಿಸಿದನು. ಗ್ರೀಕ್ ತತ್ವಜ್ಞಾನಿಗಳು ಸ್ವತಂತ್ರ ವಿಚಾರ ಪ್ರವೃತ್ತಿ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಪ್ರಚುರಪಡಿಸಿ. ವಿಜ್ಞಾನದಾರಂಭಕ್ಕೆ ಬುನಾದಿ ಹಾಕಿದರು. ಗ್ರೀಕರು ಅನೇಕ ವೈಜ್ಞಾನಿಕ ಸಂಗತಿಗಳನ್ನು ಈಜಿಪ್ಷಿಯನ್ನರಿಂದಲೂ ಬೆಬಿಲೋನಿಯನ್ನರಿಂದಲೂ ಕಲಿತುಕೊಂಡರು. ಗ್ರೀಕ್ ವಿಜ್ಞಾನದ ಅಡಿಪಾಯ ರಚಿಸಿದವನು ಅರಿಸ್ಟಾಟಲ್. ಈತನ ಶಿಷ್ಯನಾದ ಥಿಯೊಫ್ರೇಸ್ಟಸ್ ಸಸ್ಯಶಾಸ್ತ್ರವನ್ನು ಅಭಿವೃದ್ಧಿ

ಪಡಿಸಿದನು. ಕೋಪರನಿಕಸನಿಗಿಂತ ಅನೇಕ ಶತಕಗಳ ಹಿಂದೆಯೇ ಅರಿಸ್ಟಾರ್ಕಸ್ (ಕ್ರಿ. ಪೂ. ३೧೧ - ೨३೦) ಸೌರ ಸಿದ್ಧಾಂತವನ್ನು [Theory of solar system]ಮಂಡಿಸಿದನು. ಇವನು ಪೃಥ್ವಿಯ ಅಳತೆಯನ್ನು ಲೆಕ್ಕ ಹಾಕಿದನು. ಇರಟೋಸ್ಥನೀಸ್ (ಕ್ರಿ. ಪೂ. ೨೭೬-೧೯೬) ಭೂಗೋಲ ಗ್ರಂಥ ಬರೆದನಲ್ಲದೆ, ಜಗತ್ತಿನ ನಕಾಶೆಯನ್ನೂ ರೂಪಿಸಿದನು. ಪಶ್ಚಿಮಾಭಿಮುಖವಾಗಿ ಜಲಪರ್ಯಟನ ಮಾಡಿದರೆ ಭಾರತವನ್ನು ತಲುಪುವುದು ಸಾಧ್ಯ ಎಂದು ಸೂಚಿಸಿದನು.

ಭೂಮಿತಿ ಶಾಸ್ತ್ರದಲ್ಲಿ ಗ್ರೀಕರು ಬಹಳ ಮುಂದುವರಿದಿದ್ದರು. ಥೇಲ್ಸನು ಈಜಿಪ್ತ ದೇಶದವರ ಭೂಮಿತಿ ಜ್ಞಾನವನ್ನು ಅಳವಡಿಸಿಕೊಂಡನಲ್ಲದೆ, ಬಿಂದು (point) ಮತ್ತು 'ರೇಖೆ' (line) ಇವುಗಳ ಕಲ್ಪನೆಯನ್ನು ಕೊಟ್ಟನು. ಭೂಮಿತಿ ಶಾಸ್ತ್ರದಲ್ಲಿ ಪೈಥಾಗೊರಸನು ಮಾಡಿದ ಸಾಧನೆ ಸುಪ್ರಸಿದ್ಧವಾಗಿದೆ. ಗಣಿತ ಶಾಸ್ತ್ರದ ಸಹಾಯದಿಂದ ಇವನು 'ಪೃಥ್ವಿಯು ದುಂಡಗಿದೆ' ಎಂಬುದನ್ನು ಸಿದ್ಧ ಮಾಡಿಕೊಟ್ಟನು. ಇವನು (ಕ್ರಿ. ಪೂ. ೫೭೦-೫೦೦) ಸಂಖ್ಯಾ ಶಾಸ್ತ್ರದ ಉಪಯೋಗಗಳನ್ನು ತೋರಿಸಿಕೊಟ್ಟನು. ಸಂಖ್ಯೆಗಳು ಮಾನವ ಆತ್ಮವನ್ನು ಪರಿಶುದ್ಧಗೊಳಿಸುವ ಸಾಮರ್ಥ್ಯ ಪಡೆದಿವೆಯೆಂದು ನಂಬಿದ್ದನು. ಧರ್ಮವನ್ನು ಪುನರ್ಘಟಿಸುವುದು ಮತ್ತು ಪ್ರಾಚೀನ ಕಾಲದ ನಂಬಿಕೆಗಳನ್ನು ಹೊಸ ದೃಷ್ಟಿಕೋನದಿಂದ ಅರ್ಥೈಸುವುದು ಪೈಥಾಗೋರಸನ ಪ್ರಧಾನ ಉದ್ದೇಶವಾಗಿತ್ತು.

ಯುಕ್ಲಿಡ್ ಬರೆದ ಭೂಮಿತಿ ಗ್ರಂಥವು ಇಂದಿಗೂ ಸಕ

ಲರ ಮನ್ನಣೆಗೆ ಪಾತ್ರವಾಗಿದೆ. ಆರ್ಕಿಮಿಡಿಸನ ಸಿದ್ಧಾಂತ ಸುಪ್ರಸಿದ್ಧವಿದೆ. ಹಿಪಾರ್ಕಸ್ ಎಂಬವನು ತ್ರಿಕೋಣಮಿತಿ ಶಾಸ್ತ್ರದಲ್ಲಿ ಪರಿಣತನಾಗಿದ್ದನು.

ಪೃಥ್ವಿಯಲ್ಲಿ ಮೊಟ್ಟ ಮೊದಲು ಕಾಣಿಸಿಕೊಂಡ ಪ್ರಾಣಿಗಳು ನೀರಿನಲ್ಲಿದ್ದವು, ನಂತರ ಅವುಗಳು ಒಣ ಭೂಮಿಗೆ ಬಂದವೆಂದು ಅನಾಕ್ಸಿಮ್ಯಾಂಡರ್ ನಂಬಿದ್ದನು. ಡೆಮೋಕ್ರೈಟಸನು ರಕ್ತ ಗುಣದ ಆಧಾರ ಮೇಲೆ ಪ್ರಾಣಿಗಳ ವರ್ಗೀಕರಣ ಮಾಡಿದನು. ಈ ವರ್ಗೀಕರಣವನ್ನು ಅರಿಸ್ಟಾಟಲನು ಮತ್ತಷ್ಟು ಸುಧಾರಿಸಿದನು

ವೈದ್ಯ ಶಾಸ್ತ್ರದಲ್ಲಿ ಪ್ರಾಚೀನ ಗ್ರೀಕರು ಮಾಡಿದ ಸಾಧನೆಯು ಸ್ತುತ್ಯಾರ್ಹವಾಗಿದೆ. ಗ್ರೀಕರು ವಿವಿಧ ರೋಗಗಳನ್ನು ಕೂಲಂಕಷವಾಗಿ ಅಭ್ಯಾಸಮಾಡಿ, ಪ್ರತಿಯೊಂದು ರೋಗವನ್ನು ನಿವಾರಿಸುವ ವಿಶಿಷ್ಟ ವಿಧಾನವನ್ನು ಕಂಡು ಹಿಡಿದರು. ಹಿಪ್ಪೊಕ್ರೇಟೀಸ್ (ಕ್ರಿ. ಪೂ. ೪೬೦-೩೭೭) "ಗ್ರೀಕ್ ವೈದ್ಯ ಶಾಸ್ತ್ರದ" ಜನಕನು. ರೋಗಗಳು. ಭೂತ–ಪೀಡೆಯಿಂದ ಬರುತ್ತವೆಂಬ ಮೂಢ ನಂಬಿಕೆಗಳನ್ನು ಅಲ್ಲಗಳೆದನು; ರೋಗಗಳ ನಿವಾರಣೆಗೆ ದೇವತೆಗಳ ಅನುಗ್ರಹ ಪಡೆಯಲಿಚ್ಛಿಸುವುದು ಮೂರ್ಖತನವೆಂದು ಹೇಳಿದನು. ರೋಗಿಗಳ ಶಾಸ್ತ್ರೀಯ ಚಿಕಿತ್ಸೆ ಮತ್ತು ರೋಗ ನಿದಾನ ಪದ್ಧತಿಗಳನ್ನು ಆರಂಭಿಸಿ, ಆಧುನಿಕ ವೈದ್ಯಕೀಯ ವೃತ್ತಿಯ ತಳಹದಿ ಹಾಕಿದವನು ಹಿಪ್ಪೊಕ್ರೇಟೀಸ್. ರೋಗಗಳನ್ನು ತಡೆಗಟ್ಟಲು ಮುಂಜಾಗ್ರತೆಯ ಕ್ರಮವಾಗಿ ಸ್ವಚ್ಛತೆ ಏರ್ಪಡುವಂತೆ ನೋಡಿಕೊಳ್ಳಬೇಕೆಂದು ಈತನು ಹೇಳಿ

ದನು. ರೋಗಿಗಳ ವಿಷಯವಾಗಿ ಗೌಪ್ಯತೆ ಮತ್ತು ಪ್ರಮಾಣಿಕತೆಯನ್ನು ಕಾಪಾಡಿಕೊಳ್ಳುವಂತೆ ನಿರ್ದೇಶಿಸುವ ಹಿಪ್ಪೊಕ್ರೇಟೀಸನ ಪ್ರತಿಜ್ಞೆಯನ್ನು ಇಂದಿಗೂ ಎಲ್ಲ ವೈದ್ಯಕೀಯ ಪದವೀಧರರು ಸ್ವೀಕರಿಸುತ್ತಾರೆ. ಈ ಪ್ರತಿಜ್ಞೆಯಲ್ಲಿ ನೈತಿಕ ಮೌಲ್ಯಗಳು ಹಾಗೂ ಸಾಮಾಜಿಕ ಹೊಣೆಗಾರಿಕೆಗಳು ಅಡಕವಾಗಿವೆ.

ಹಿಪ್ಪೋಕ್ರೇಟಿಸನ ಪ್ರತಿಜ್ಞೆ ಹೀಗಿದೆ:— "ನನ್ನ ತಿಳವಳಿಕೆ ಮತ್ತು ಶಕ್ತ್ಯಾನುಸಾರವಾಗಿ ರೋಗಿಗಳಿಗೆ ತಾರಕವಾದ ಚಿಕಿತ್ಸಾ ವಿಧಾನವನ್ನೇ ನಾನು ಅನುಸರಿಸುತ್ತೇನೆ. ಅದನ್ನು ಅವರ ಅಹಿತಕ್ಕಾಗಿ ಅಥವಾ ದುರುದ್ದೇಶಕ್ಕಾಗಿ ಕೈಕೊಳ್ಳಲಾರೆನು. ನಾನು ಯಾರಿಗೂ ಅಪಾಯಕಾರಿಯಾದ ಔಷಧವನ್ನು ಕೊಡುವುದಿಲ್ಲ; ಅಂತಹದನ್ನು ಯಾರಾದರೂ ಕೊಡಲು ನನ್ನನ್ನು ಕೇಳಿದರೂ ಹಾಗೆ ಮಾಡಲಾರೆ. ಆ ಉದ್ದೇಶಕ್ಕೆ ಪ್ರೋಷಕವಾಗುವಂತಹ ಯಾವ ಸಲಹೆಗಳನ್ನು ನಾನು ಮಾಡಲಾರೆ........ ಯಾವುದೇ ರೋಗಿಯ ಗೃಹಪ್ರವೇಶ ಮಾಡಿದರೂ ನಾನು ರೋಗಿಯ ಹಿತವನ್ನೇ ಸಾಧಿಸುವ ಸದುದ್ದೇಶ ಹೊಂದಿರುತ್ತೇನೆ. ಅಲ್ಲಿ ನಾನು ಸ್ವಯಂ ಪ್ರೇರಣೆಯಿಂದ ಯಾವ ಭ್ರಷ್ಟಾಚಾರ ಮತ್ತು ಕುಕೃತ್ಯಗಳಿಗೆ ಮನಸ್ಸು ಮಾಡುವುದಿಲ್ಲ; ಇದಕ್ಕಿಂತ ಹೆಚ್ಚಾಗಿ, ಅಲ್ಲಿಯ ಸ್ತ್ರೀ ಅಥವಾ ಪುರುಷರ ಮೇಲೆ ಲೈಂಗಿಕ ಅತ್ಯಾಚಾರವನ್ನು ಎಸಗುವುದಿಲ್ಲ. ಜನರ ಜೀವನದ ಸಂಬಂಧವಾಗಿ ನಾನು ಕಂಡ ಅಥವಾ ಕೇಳಿದ ಸಂಗತಿಗಳನ್ನಾಗಲಿ, ರೋಗಿಗಳ ಚಿಕಿತ್ಸೆ ಮಾಡುವಾಗ ಅವರ ಬಗ್ಗೆ ಪಡೆದ ಮಾಹಿತಿಯನ್ನಾಗಲಿ (ಅದು ಹೊರ ಜಗತ್ತಿಗೆ ಪ್ರಸಾರವಾಗದಿರುವುದೇ ವಿಹಿತವೆಂದು ತೋರಿದಾಗ) ಗೌಪ್ಯವಾಗಿಡುತ್ತೇನೆ".

ಅನೆಕ್ಸಗೋರಸ್ ಸೂರ್ಯ ಮತ್ತು ತಾರೆಗಳ ಬಗೆಗೆ ಶಾಸ್ತ್ರೀಯ ವಿವರಣೆಯಿತ್ತನು. ಹಿರೋಫಿಲಸನು. (ಕ್ರಿ.ಪೂ. ೩ ನೆಯ ಶತಮಾನ) "ಅಂಗ ವಿಚ್ಛೇದನ ವಿದ್ಯೆಯ ಜನಕ" ಎಂದು ಹೆಸರಾಗಿದ್ದಾನೆ. ಇವನು ಮಾನವ ಶರೀರದ ಅಂಗ ವಿಚ್ಛೇದನ ಮಾಡಿ, ಶರೀರದ ಆಂತರಿಕ ಕಾರ್ಯಗಳನ್ನು ಅರಿತುಕೊಂಡನು. ನಾಡೀ ಪರೀಕ್ಷೆ ಮಾಡುವ ಉಪಕರಣವೊಂದನ್ನು ಸಿದ್ಧಪಡಿಸಿದನು. ಇರಾಸಿಸ್ಟ್ರೇಟಸನನ್ನು "ಶರೀರ ಶಾಸ್ತ್ರದ ಜನಕ" ಎಂದು ಬಣ್ಣಿಸಲಾಗಿದೆ. ರಕ್ತನಾಳಗಳಲ್ಲಿ ಚಲಿಸುವ ರಕ್ತವು ದೇಹದ ಪೋಷಣೆಗೆ ಕಾರಣವೆಂದು ಇವನು ನಂಬಿದ್ದನು.

ಪ್ರಾಚೀನ ಗ್ರೀಕರು ವಿಜ್ಞಾನ ರಂಗದಲ್ಲಿ ಮಾಡಿದ ಪ್ರಗತಿಯು ಮುಂದಿನ ವೈಜ್ಞಾನಿಕ ಪ್ರಗತಿಗೆ ತುಂಬ ಸಹಾಯಕವಾಯಿತು. ಇಂದಿನ ವಿಜ್ಞಾನ ಕೋಶದಲ್ಲಿಯ ಬಹುಪಾಲು ಶಬ್ದಗಳು ಗ್ರೀಕ್ ಮೂಲದ್ದಾಗಿವೆ.

ಹೀಗೆ, ಪ್ರಾಚೀನ ಗ್ರೀಕರು ವಿವಿಧ ಕ್ಷೇತ್ರಗಳಲ್ಲಿ ಅಪ್ರತಿಮ ಕೊಡುಗೆಗಳನ್ನಿತ್ತು ಮಾನವ ಕುಲಕ್ಕೆ ಮಹದುಪಕಾರ ಮಾಡಿದ್ದಾರೆ. ಲೌಕಿಕ ಮತ್ತು ತಾತ್ವಿಕ ರಂಗಗಳಲ್ಲಿಯ ಅವರ ಸಾಧನೆಗಳು ಪ್ರಪಂಚ ನಾಗರಿಕತೆಯ ಪ್ರಗತಿಗೆ ಪೋಷಕವಾದವು. ಮುಂದಿನ ಅಧ್ಯಾಯದಲ್ಲಿ ಗ್ರೀಕರ ಕೊಡುಗೆಗಳ ಉಳಿವು ಮತ್ತು ಪ್ರಸಾರವಾದ ರೀತಿಯನ್ನು ಬಣ್ಣಿಸಲಾಗಿದೆ.

## ಅಧ್ಯಾಯ ೩.

# ಉಪಸಂಹಾರ

### ಗ್ರೀಕ್ ಸಂಸ್ಕೃತಿಯ ಪ್ರಸಾರ

ಕ್ರಿ ಪೂ. ೩೩೮ರಲ್ಲಿ ಅಂತರ್ಯುದ್ಧಗಳಿಂದ ಬಲಹೀನವಾಗಿದ್ದ ಗ್ರೀಸು ಮೆಸಡೋನಿಯದ ದೊರೆ ಫಿಲಿಪ್‌ನ ದಾಳಿಗೀಡಾಗಿ ತನ್ನ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡಿತೆಂಬುದನ್ನು ಈಗಾಗಲೇ ತಿಳಿಮಕೊಂಡಿದ್ದೇವೆ. ಕ್ರಿ. ಪೂ. ೩೩೬ ರಲ್ಲಿ ಫಿಲಿಪ್ ಹತನಾದನು. ಆಗ ಇಪ್ಪತ್ತು ವಯಸ್ಸಿನ ಆತನ ಮಗ ಅಲೆಕ್ಝಾಂಡರನು ಮೆಸಡೋನಿಯದ ದೊರೆಯಾದನು. ಇವನು ತತ್ವಜ್ಞಾನಿ ಅರಿಸ್ಟಾಟಲನಿಂದ ಶಿಕ್ಷಣ ಪಡೆದಿದ್ದನು. ಗ್ರೀಕ್ ಕಾವ್ಯ. ತತ್ವಜ್ಞಾನ, ವಿಜ್ಞಾನಗಳಲ್ಲಿ ಆಸಕ್ತಿ ಹೊಂದಿದ್ದನು. ಫಿಲಿಪನ ಮರಣದ ನಂತರ ಗ್ರೀಕರು ಮೆಸಡೋನಿಯದ ಪ್ರಭುತ್ವದ ವಿರುದ್ಧ ದಂಗೆಯೇಳುವ ಹವಣಿಕೆಯಲ್ಲಿದ್ದರು. ಆಗ ಅಲೆಕ್ಝಾಂಡರನು ದಂಡೆತ್ತಿ ಬಂದು ಥೀಬ್ಸ ನಗರ-ರಾಜ್ಯವನ್ನು ಗೆದ್ದುಕೊಂಡು, ಅದನ್ನು ಹಾಳುಗೆಡವಿದನು. ಗ್ರೀಸು ಈತನ ಪ್ರಭುತ್ವವನ್ನು ಒಪ್ಪಿಕೊಂಡಿತು.

ರಾಜಕೀಯ ಸ್ವಾತಂತ್ರ್ಯ ನಷ್ಟವಾದರೂ ಗ್ರೀಸಿನ ಬೌದ್ಧಿಕ ಮತ್ತು ಸಾಂಸ್ಕೃತಿಕ ಸಾಮ್ರಾಜ್ಯ ಪ್ರಭಾವ ಶಾಲಿಯಾಗಿತ್ತು. ಗ್ರೀಸಿನ ಸಾಂಸ್ಕೃತಿಕ ಕೊಡುಗೆಗಳು ಅಲೆಕ್ಝಾಂಡರನ ವಿಶಾಲ ಸಾಮ್ರಾಜ್ಯದಲ್ಲೆಲ್ಲ ಹರಡಿದವೆಂಬುದು ಗಮ

ನಾರ್ಹವಾದ ಸಂಗತಿ. ಅಲೆಕ್ಸಾಂಡರನು ಗ್ರೀಕ್ ಸಂಸ್ಕೃತಿಯ ಶ್ರೇಷ್ಠತೆಗೆ ಮಾರು ಹೋಗಿದ್ದನು. ಅವನು ಈ ಸಂಸ್ಕೃತಿಯನ್ನು ಅತ್ಯಂತ ಗೌರವ ಭಾವದಿಂದ ಕಂಡನಲ್ಲದೆ, ಅದರ ಪ್ರಸಾರಕ ನಾದನು. ಗ್ರೀಕ್ ಸಂಸ್ಕೃತಿಯ ವಿಶಾಲ ತಳಹದಿಯ ಮೇಲೆ ಯುರೋಪ್ ಮತ್ತು ಏಶಿಯಗಳ ಜನರನ್ನು ಒಂದುಗೂಡಿಸುವ ಮಹಾ ಯೋಜನೆ ಅವನದಾಗಿತ್ತು. ಈ ಉದ್ದೇಶ ಸಾಧನೆಗಾಗಿ ಅಲೆಕ್ಸಾಂಡರನು ಏಶಿಯದ ನಾಡುಗಳಲ್ಲಿ ಗ್ರೀಕ್ ವಸಾಹತು ಗಾರಿಕೆಗೆ ಉತ್ತೇಜನವಿತ್ತನು. ಈಜಿಪ್ತದಿಂದ ಅಫಘಾನಿ ಸ್ತಾನದ ವರೆಗಿನ ಪ್ರದೇಶದಲ್ಲಿ ಒಟ್ಟು ೭೫ ಪಟ್ಟಣಗಳನ್ನು ಸ್ಥಾಪಿಸಿದನು. ಅವುಗಳಲ್ಲಿ ಅಲೆಕ್ಸಾಂಡ್ರಿಯಾ (ಈಜಿಪ್ತದಲ್ಲಿ), ಪೆರ್ಗಮೆಮ್ (ಏಶಿಯಾ ಮೈನರಿನಲ್ಲಿ), ಅಂಟಿಯಾಕ್ (ಸಿರಿಯಾ ದಲ್ಲಿ) ಮತ್ತು ರೋಡ್ಸ್ (ಈಜಿಯನ್ ಸಮುದ್ರದಲ್ಲಿ) ಈ ನಾಲ್ಕು ನಗರಗಳು ಗ್ರೀಕ್ ಕಲೆ, ವಿದ್ಯೆ, ಸಾಹಿತ್ಯ, ತತ್ವಜ್ಞಾನಗಳ ಮಹತ್ವದ ಕೇಂದ್ರಗಳಾಗಿದ್ದವು. ಗ್ರೀಕ್ ವಿಜ್ಞಾನಿಗಳ, ತತ್ವ ಜ್ಞಾನಿಗಳ ಮತ್ತು ಕಲಾವಿದರ ಕಾರ್ಯ ಮುಂದುವರಿಯಿತು. ಗ್ರೀಕರ ಕಲೆ ಮತ್ತು ವಿಚಾರಗಳ ಪ್ರಭಾವವು ಭಾರತದ ವರೆಗೂ ಪಸರಿಸಿತು. ಗ್ರೀಕ್ ಕಲೆಯ ಪ್ರಭಾವವನ್ನು ಗಾಂಧಾರ ಕಲೆಯಲ್ಲಿ ಕಾಣುತ್ತೇವೆ. ಅಲೆಕ್ಸಾಂಡರನ ಸಾಮ್ರಾಜ್ಯದಲ್ಲೆಲ್ಲ ಗ್ರೀಕ್ ಭಾಷೆ ಪ್ರಸಾರ ಹೊಂದಿತು. ಪೌರ್ವಾತ್ಯ ವಾಸ್ತು ಶಿಲ್ಪದ ಪ್ರಭಾವದಿಂದಾಗಿ ಗ್ರೀಕ್ ವಾಸ್ತುಶಿಲ್ಪ ಶೈಲಿಗಳು ಮತ್ತಷ್ಟು ಸುಧಾರಿಸಿದವು.

ಹೆಲನಿಸ್ಟಿಕ್ ನಾಗರಿಕತೆಯಲ್ಲಿ ವಿಜ್ಞಾನ ಮತ್ತು ವಿದ್ಯೆಗೆ ಅಪಾರ ಉತ್ತೇಜನ ದೊರೆಯಿತು. ಗಣಿತ. ಭೂಮಿತಿ ಶಾಸ್ತ್ರ, ಭೂಗೋಲ ಶಾಸ್ತ್ರ ಖಗೋಲ ಶಾಸ್ತ್ರ, ಅಂಗವಿಚ್ಛೇದನ ವಿದ್ಯೆ, ವೈದ್ಯ ಶಾಸ್ತ್ರಗಳಲ್ಲಿ ಗಮನಾರ್ಹವಾದ ಅಭಿವೃದ್ಧಿ ಉಂಟಾಯಿತು.

ಅಲೆಕ್ಸಾಂಡರನು ನಿರ್ಮಿಸಿದ ಹೆಲೆನಿಸ್ಟಿಕ್ ಸಾಮ್ರಾಜ್ಯವು ಗ್ರೀಸಿನ ಅಮರ ಕೊಡುಗೆಗಳನ್ನು ರೋಂ ಸಾಮ್ರಾಜ್ಯಕ್ಕೆ ತಲುಪಿಸಿತು. ರೋಮನ್ ವಿಜೇತರೂ ಗ್ರೀಕ್ ಸಂಸ್ಕೃತಿಯ ಹಿರಿಮೆಗೆ ಮಾರು ಹೋದರು. ರೋಮನ್ ನಾಗರಿಕರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಗ್ರೀಕ್ ಶಿಕ್ಷಕರನ್ನು ಕರೆಯಿಸಿಕೊಳ್ಳುತ್ತಿದ್ದರಂತೆ.

ಗ್ರೀಕರು ರೋಮನ್ನರಿಗೆ ಗುರುಸ್ಥಾನದಲ್ಲುಳಿದರು. ರೋಮನ್ನರು ಗ್ರೀಕರ ಕಲೆ, ಸಾಹಿತ್ಯ, ವಿಜ್ಞಾನಗಳನ್ನು ಅಳವಡಿಸಿಕೊಂಡರು. ಹೀಗೆ ಗ್ರೀಕರ ಕೊಡುಗೆಗಳು ರೋಮನ್ ಸಾಮ್ರಾಜ್ಯದಲ್ಲಿ ಹರಡಿದವು. ಗ್ರೀಕರು ಗ್ರಹಿಸಿದ್ದ ಮಾನವ ಕುಲದ ಏಕತ್ವದ ಕಲ್ಪನೆಯನ್ನು ಬಳಕೆಗೆ ತಂದವರು ರೋಮನ್ನರು. ಗ್ರೀಕರ ಕೊಡುಗೆಗಳನ್ನು ಯುರೋಪಿನ ಜನರಿಗೆ ಸಾಗಿಸಿದವರು ಅವರೇ.

ಹದಿನಾರನೆಯ ಶತಮಾನದಲ್ಲಿ ಯುರೋಪಿನಲ್ಲಿ ಸಾಂಸ್ಕೃತಿಕ ಪುನರುಜ್ಜೀವನ ಜರುಗಿತು. ಆಗ ಪ್ರಾಚೀನ ಗ್ರೀಕರ ವಿದ್ಯೆ, ಕಲೆ, ಸಾಹಿತ್ಯ ಕೃತಿಗಳಲ್ಲಿ ಯುರೋಪಿನ ಜನರು ಆಸಕ್ತಿ ಹೊಂದಿದರು. ಮಧ್ಯಯುಗದಲ್ಲಿ ಮರೆತು ಹೋಗಿದ್ದ ಗ್ರೀಕ್

ಸಂಸ್ಕೃತಿಯ ಕೊಡುಗೆಗಳು ಹದಿನಾರನೆಯ ಶತಮಾನದಲ್ಲಿ ಪುನರುಜ್ಜೀವನ ಹೊಂದಿದವು. ಇದರ ಪರಿಣಾಮವಾಗಿ ಆಧುನಿಕ ಯುುರೋಪಿನ ನಾಗರಿಕತೆಯು ಹೊಸ ಶಕ್ತಿ, ಚೈತನ್ಯಗಳನ್ನು ಪಡೆಯಿತು. ೧೯ನೆಯ ಶತಕದಲ್ಲಿ ಯುುರೋಪಿನ ನಾಗರಿಕತೆಯು ವಿಶ್ವವ್ಯಾಪಿಯಾಗುತ್ತ ಬಂದಂತೆ, ಗ್ರೀಕರ ಕೊಡುಗೆಗಳು ವಿಶ್ವ ನಾಗರಿಕತೆಯ ಬಹುಮೂಲ್ಯ ಭಾಗವಾಗಿ ಉಳಿದಿವೆ. ಪ್ರಾಚೀನ ಗ್ರೀಕ್ ಸಂಸ್ಕೃತಿಯು ಯುುರೋಪಿನ ನಾಗರಿಕತೆಯ ಬುನಾದಿ. ಅಂತೆಯೇ, ಪಂಡಿತ ಜವಾಹರಲಾಲ ನೆಹರೂ ಅವರು "**ಯುುರೋಪು ಪ್ರಾಚೀನ ಗ್ರೀಸಿನ ಕೂಸು**" ಎಂದು ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

ಪ್ರಾಚೀನ ಗ್ರೀಕರು ಅನುಷ್ಠಾನಕ್ಕೆ ತಂದ ಪ್ರಜಾಪ್ರಭುತ್ವ ಪದ್ಧತಿಯನ್ನು ಆಧುನಿಕ ಕಾಲದ ಅನೇಕ ರಾಷ್ಟ್ರಗಳು ಯಶಸ್ವಿಯಾಗಿ ಪ್ರಯೋಗಿಸಲು ಯತ್ನಿಸುತ್ತಲಿವೆ. ಓಲಿಂಪಿಕ್ ಕ್ರೀಡಾ ಸ್ಪರ್ಧೆಗಳು ಜಾಗತಿಕ ಮಟ್ಟದಲ್ಲಿ ಜರುಗುತ್ತವೆ. ತತ್ವಜ್ಞಾನ, ಸಾಹಿತ್ಯ, ನಾಟಕ, ಇತಿಹಾಸ, ಶಿಲ್ಪ, ವಾಸ್ತುಶಿಲ್ಪ, ವಿಜ್ಞಾನ ಮುಂತಾದ ವಿಷಯಗಳನ್ನು ಆಳವಾಗಿ ಅಭ್ಯಾಸ ಮಾಡುವರೆಲ್ಲರೂ ಗ್ರೀಕರ ಪ್ರಮಾಣಭೂತ ಕೃತಿಗಳ ಅಧ್ಯಯನ ನಡಿಸಲೇ ಬೇಕಾಗುತ್ತದೆ.

# ಅನುಬಂಧ

## ಅಥೆನ್ಸ್ ಮತ್ತು ಸ್ಪಾರ್ಟಾ

ಪ್ರಾಚೀನ ಗ್ರೀಸಿನ ಮಹತ್ವದ ನಗರ-ರಾಜ್ಯಗಳಾದ ಅಥೆನ್ಸ್ ಮತ್ತು ಸ್ಪಾರ್ಟಾ ಪರಸ್ಪರ ವಿರೋಧಿಗಳಾಗಿದ್ದವು. ಇವೆರಡರ ಅಭ್ಯಾಸ ಮಹತ್ವಪೂರ್ಣವೂ ಸ್ವಾರಸ್ಯಕರವೂ ಆಗಿದೆ.

ಈಜಿಯನ್ ಸಮುದ್ರದಲ್ಲಿ ಚಾಚಿಕೊಂಡಿರುವ ಚಿಕ್ಕ ದ್ವೀಪಕಲ್ಪವಾಗಿರುವ ಅಟಿಕಾ ಅಯೋನಿಯನ್ ಪಂಗಡದ ನೆಲೆವಿಡಾಗಿತ್ತು. ಅಥೆನ್ಸ್ ಅದರ ರಾಜಧಾನಿ ಕ್ರಿ. ಪೂ. ೬ನೆಯ ಶತಮಾನದಲ್ಲಿ ಅಥೆನ್ಸ್‌ನ ಸಂಪದಭಿವೃದ್ಧಿ ಉಂಟಾಯಿತು. ಅಥೇನಾ ಈ ನಗರ-ರಾಜ್ಯದ ಅಧಿದೇವತೆ. ಅಥೆನ್ಸಿನ ಸಾಮಾಜಿಕ ಜೀವನದಲ್ಲಿ ವ್ಯಕ್ತಿಯ ಪ್ರಗತಿಗೆ ವಿರೋಧಕವಾಗುವ ಕಟ್ಟುಪಾಡುಗಳಿರಲಿಲ್ಲ. ಅಲ್ಲಿಯ ವಿಚಾರ ಸ್ವಾತಂತ್ರ್ಯವು ರಾಜಕಾರಣ, ಕಲೆ, ಸಾಹಿತ್ಯ, ತತ್ವಜ್ಞಾನ ಮುಂತಾದ ರಂಗಗಳ ಅಪೂರ್ವ ಅಭಿವೃದ್ಧಿಗೆ ಕಾರಣವಾಯಿತು. ಗುಲಾಮರು ಮನೆಗೆಲಸ, ಕೃಷಿ ಮತ್ತು ಶ್ರಮದ ಕಾರ್ಯಗಳನ್ನು ಮಾಡುತ್ತಿದ್ದರಿಂದ ಅಥೆನ್ಸಿನ ನಾಗರಿಕರಿಗೆ ವಿಪುಲ ವಿಶ್ರಾಂತಿ ದೊರಕುತ್ತಿತ್ತು. ಇದರಿಂದ ಅವರು ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆಸಕ್ತಿಯಿಂದ ಭಾಗವಹಿಸುವುದು ಸಾಧ್ಯವಾಗಿತ್ತು. ಸ್ತ್ರೀಯರು ಮಾನವಂತಿಕೆ, ಅತಿಥಿ ಸತ್ಕಾರ, ಪಾತಿವ್ರತ್ಯ, ತ್ಯಾಗ,

ಸೇವೆಗಳಿಗೆ ಹೆಸರಾಗಿದ್ದರು. ಅಥೆನ್ಸಿನ ಜನರಿಗೆ ಬಯಲು ಜೀವನ, ಚರ್ಚೆ, ಸಂಗೀತ, ನೃತ್ಯಗಳೆಂದರೆ ಬಲು ಪ್ರೀತಿ. ಪ್ರೇಮ ವಿವಾಹಕ್ಕೆ ಎಡೆಯಿರಲಿಲ್ಲ. ಅವರ ನಿತ್ಯ ಜೀವನದಲ್ಲಿ ಧರ್ಮ ಹಾಸುಹೊಕ್ಕಾಗಿತ್ತು.

ಅಥೆನ್ಸಿನ ಜನರು ಕಲಾಪ್ರೇಮಿಗಳೂ ರಸಿಕರೂ ಸೌಂದರ್ಯ ಪ್ರಿಯರೂ ಆಗಿದ್ದರು. ಅಂಥವರ ಮಧ್ಯದಲ್ಲಿ ಪಾರ್ಥೆನಾನ್ ದಂತಹ ಭವ್ಯ, ಸುಂದರ ದೇವಾಲಯ, ಜೀವಕಳೆಯಿಂದ ಮೆರೆಯುವ ಮಾನವರ ಮತ್ತು ದೇವತೆಗಳ ಪ್ರತಿಮೆಗಳು, ಮನಮೋಹಕವಾದ ಮಣ್ಣಿನ ಪಾತ್ರೆಗಳು ಮತ್ತು ಶಿಲ್ಪಕಲಾ ಕೃತಿಗಳು ನಿರ್ಮಿಸಲ್ಪಟ್ಟವು.

ಪೆರಿಕ್ಲೀಸನ ಯುಗದಲ್ಲಿ (ಕ್ರಿ. ಪೂ. ೫೦೦-೪೨೯) ಅಥೆನ್ಸ್ ಸರ್ವಾಂಗೀಣ ಪ್ರಗತಿ ಸಾಧಿಸಿ, "ಇಡೀ ಗ್ರೀಸಿನ ಶಾಲೆ" ಯಾಗಿ ಮೆರೆಯಿತು. ಸ್ವಾತಂತ್ರ್ಯ ಪ್ರೇಮಿಗಳಾಗಿದ್ದ ಅಥೆನ್ಸಿನವರು ಪರ್ಶಿಯದ ಆಕ್ರಮಣವನ್ನು ಹಿಮ್ಮೆಟ್ಟಿಸುವಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ವಿವಿಧ ರಾಜಕೀಯ ಪ್ರಯೋಗಗಳನ್ನು ನಡೆಸಿದ ಅಥೆನ್ಸಿನವರು ಪ್ರತ್ಯಕ್ಷ ಪ್ರಜಾಸತ್ತೆಯನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರಲು ಯತ್ನಿಸಿದರು. ಗ್ರೀಕ್ ಸಂಸ್ಕೃತಿಯನ್ನು ಅತ್ಯುನ್ನತ ಮಟ್ಟಕ್ಕೇರಿಸಿದ ಶ್ರೇಯಸ್ಸು ಅಥೆನ್ಸಿನವರದು. ಅಥೆನ್ಸ್ ಶ್ರೇಷ್ಠ ಕವಿಗಳ, ಪಂಡಿತರ, ತತ್ವಜ್ಞಾನಿಗಳ, ಕಲಾವಿದರ ಇತಿಹಾಸಕಾರರ, ಶಿಲ್ಪಿಗಳ ಮತ್ತು ರಾಜನೀತಿ ವಿಶಾರದರ ಬೀಡಾಗಿತ್ತು. ಒಟ್ಟಿನಲ್ಲಿ, ಜೀವನ ನಿಷ್ಠೆ, ವಿಚಾರ ಸ್ವಾತಂತ್ರ್ಯ, ಕಲ್ಪನಾಸಾಮರ್ಥ್ಯ, ಬಹುಮುಖ ಪ್ರತಿಭೆ.

ಸ್ವಾತಂತ್ರ್ಯಪ್ರಿಯತೆ, ರಾಜಕೀಯ ಪ್ರಜ್ಞೆ, ಜ್ಞಾನತೃಷ್ಣೆ ಮುಂತಾದ ವಿಷಯಗಳಲ್ಲಿ ಅಥೆನ್ಸಿವರನ್ನು ಮೀರಿಸಿದವರು ತೀರ ವಿರಳ.

ಸ್ಪಾರ್ಟಾ ಲೆಕೋನಿಯದ ಜಿಲ್ಲೆಯ ರಾಜಧಾನಿಯಾಗಿತ್ತು. ಇದು ಡೋರಿಯನ್ನರ ಬೀಡಾಗಿತ್ತು. ಅತ್ಯಧಿಕ ಸಂಖ್ಯೆಯಲ್ಲಿದ್ದ (Helots) ಗುಲಾಮರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸ್ಪಾರ್ಟನ್ನರ ಸಮಸ್ಯೆಯಾಗಿತ್ತು. ಆದ್ದರಿಂದ ಅವರು ಬಲಾಢ್ಯವಾದ ಭೂ-ಸೇನೆ ಕಟ್ಟಿಕೊಳ್ಳಬೇಕಾಯಿತು. ಸ್ಪಾರ್ಟಾದಲ್ಲಿ ಬೌದ್ಧಿಕ ತರಬೇತಿಗಿಂತ ಶಾರೀರಕ ಸಂವರ್ಧನೆಗೆ ಮಹತ್ವಕೊಡಲಾಗಿತ್ತು. ಸಶಕ್ತ ಮತ್ತು ಸಮರ್ಥ ಸೈನಿಕರನ್ನು ನಿರ್ಮಿಸುವದೇ ಅವರ ಪ್ರಮುಖ ಧ್ಯೇಯವಾಗಿತ್ತು. ದುರ್ಬಲ ಮಕ್ಕಳನ್ನು ಕಾಡಿನಲ್ಲಿ ಬಿಸಾಡುತ್ತಿದ್ದರು.

ಸ್ಪಾರ್ಟಾದ ಸ್ತ್ರೀಯರು ಸದೃಢಕಾಯರೂ ಧೈರ್ಯಶಾಲಿಗಳೂ ಪರಾಕ್ರಮಪ್ರಿಯರೂ ಆಗಿದ್ದರು. ಅಂತಹ ಗುಣಗಳನ್ನು ಮೂಡಿಸುವ ಕಠೋರ ಸೈನಿಕ ಶಿಕ್ಷಣವನ್ನು ಬಾಲಕ-ಬಾಲಕಿಯರಿಗೆ ಕೊಡುತ್ತಿದ್ದರು. ಕೆಲವು ಸ್ತ್ರೀಯರು ಯುದ್ಧರಂಗದಿಂದ ಓಡಿ ಬಂದ ತಮ್ಮ ಹೇಡಿ ಮಕ್ಕಳನ್ನು ಕೊಲ್ಲುವುದಕ್ಕೂ ಹಿಂಜರಿಯುತ್ತಿರಲಿಲ್ಲ!

ಸ್ಪಾರ್ಟಾ ಒಂದು ಸೈನಿಕ ಶಿಬಿರದಂತಿತ್ತು. ಪ್ರತಿಯೊಬ್ಬ ಸ್ಪಾರ್ಟನ್ನನು ಕಠೋರವಾದ ಸೈನಿಕ ಶಿಸ್ತನ್ನು ಪರಿಪಾಲಿಸುತ್ತ, ಜೀವಾವಧಿ ಸೈನಿಕಸೇವೆ ಸಲ್ಲಿಸುತ್ತಿದ್ದನು. ಸ್ಪಾರ್ಟಾದಲ್ಲಿ

ಇಬ್ಬರು ದೊರೆಗಳಿರುತ್ತಿದ್ದರು. ಅಧಿಕಾರ ಸೂತ್ರಗಳು ಕೆಲವರ ಕೈಯಲ್ಲಿ ಕೇಂದ್ರೀಕೃತವಾಗಿದ್ದವು. ಸಂಪ್ರದಾಯಶೀಲರಾದ ಸ್ಪಾರ್ಟನ್ನರು ಬದಲಾವಣೆಗಳಿಗೆ ಆಸ್ಪದ ಕೊಡಲಿಲ್ಲ. ಹೀಗಾಗಿ ಅವರ ಜೀವನ ಬಳಕೆಯಾಗದ ನೀರಿನ ಹೊಂಡದಂತಿತ್ತು. ಡೋರಿಯನ್ ಪಂಗಡಕ್ಕೆ ಸೇರಿದ ಗ್ರೀಕ್ ರಾಜ್ಯಗಳು ಸ್ಪಾರ್ಟಾದ ಮುಖಂಡತ್ವದಲ್ಲಿ "ಪೆಲಪೊನೇಸಿಯನ್ ಲೀಗ"ನ್ನು ರಚಿಸಿ ಕೊಂಡಿದ್ದವು.

ಅಥೆನ್ಸ್ ಮತ್ತು ಸ್ಪಾರ್ಟಾ ರಾಜ್ಯಗಳ ಸಾಮಾಜಿಕ, ರಾಜಕೀಯ. ಮತ್ತು ಸೈದ್ಧಾಂತಿಕ ಭಿನ್ನತೆಗಳು ಸುಸ್ಪಷ್ಟವಾಗಿದ್ದವು. ಅಥೆನ್ಸಿನವರಲ್ಲಿದ್ದ ಸ್ವಾತಂತ್ರ್ಯಾಭಿಲಾಷೆ, ದೇಶ ಪ್ರೇಮ, ವ್ಯಕ್ತಿ ಸ್ವಾತಂತ್ರ್ಯ ಕಲ್ಪನೆ. ಪ್ರಗತಿಶೀಲತೆ, ಉಚ್ಚ ಮಟ್ಟದ ಸಾಂಸ್ಕೃತಿಕ ಅಭಿರುಚಿ, ಬೌದ್ಧಿಕ ಮತ್ತು ತಾತ್ವಿಕ ಬೆಳವಣಿಗೆ, ಉದಾತ್ತೀಕರಣದ ಧ್ಯೇಯಗಳು ಸ್ಪಾರ್ಟನ್ನರಲ್ಲಿರಲಿಲ್ಲಿ. ಕಠೋರ ಶಿಸ್ತು, ಸಂಪ್ರದಾಯಶೀಲತೆ ಮತ್ತು ತೀರ ಸಾದಾ ಜೀವನದ ಅಭಿಲಾಷೆಗಳು ಸ್ಪಾರ್ಟನ್ನರನ್ನು ಸರ್ವಾಂಗೀಣ ಪ್ರಗತಿ ಪಥಕ್ಕೆ ತಲುಪಿಸಲಿಲ್ಲ. ಸ್ಪಾರ್ಟಾದ ಶ್ರೇಷ್ಠತೆ ಅದರ ಕ್ಷಾತ್ರಬಲದಲ್ಲಿತ್ತು. ಆದರೆ ಅಥೆನ್ಸ್ ಸಮಗ್ರ ಜೀವನದ ಯಶಸ್ಸಿನ ಸಂಕೇತ. ಹೇನ್ರಿ ಬರ್ಗಸನ್ ಈ ರಾಜ್ಯಗಳನ್ನು ಕುರಿತು ಹೇಳಿದ ಮಾತು ಮನನೀಯವಾಗಿದೆ— "ಸ್ಪಾರ್ಟಾ ಬದ್ಧ ಸಮಾಜವಾಗಿದ್ದರೆ (Closed Society), ಅಥೆನ್ಸ್ ಸಂಪೂರ್ಣವಾಗಿ ತೆರೆದ ಸಮಾಜ (Open Society) ಆಗಿದ್ದಿತು."

——

18 ಜನಸಂಖ್ಯೆ ಹಾಗೂ ಆಹಾರ ಸಮಸ್ಯೆ

—ಪಿ. ಎಂ. ಉಮಾಕಾಂತಶಾಸ್ತ್ರಿ

19 ಸೌರವ್ಯೂಹ —ಸಿ ಎನ್. ಶ್ರೀನಿವಾಸ ಅಯ್ಯಂಗಾರ

20 ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ

—ಸಿ. ವ್ಹಿ. ರಂಗಸ್ವಾಮಿ

21 ಸಮಾಜ ಕಾರ್ಯ —ಎಚ್. ಎಂ. ಮರುಳಸಿದ್ದಯ್ಯ

22 ಸಂಸತ್ತಿನ ಕಾರ್ಯಪದ್ಧತಿ —ಎ. ಎಂ. ರಾಜಶೇಖರಯ್ಯ

23 ಕನ್ನಡನಾಡಿನ ಶಾಸನಗಳು —ಪಿ. ಬಿ. ದೇಸಾಯಿ

24 ಕವೀಂದ್ರ ರವೀಂದ್ರರು —ಎಸ್. ಎಸ್. ಮಾಳವಾಡ

25 ನಾಗಾನಂದ —ಎಚ್. ಪಿ. ಮಲ್ಲೇಶದೇವರು

26 ಜೀವನದಲ್ಲಿ ನಗೆ —ಎಂ. ಎಸ್. ಸುಂಕಾಪುರ

27 ಬಸವಣ್ಣನವರ ಯೋಜನೆಗಳು —ಬಿ. ಸಿ. ಜವಳಿ

28 ಗಲಿಬರ ಕ್ರಾಂತಿ — ಸಿ. ವೀರಬಸವಣ್ಣ

29 ಕನ್ನಡ ಕಥಾಸೃಷ್ಟಿ —ಬಿ. ಬಿ. ಮಹೀಶವಾಡಿ

30 ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ —ಕೆ. ಕೃಷ್ಣಮೂರ್ತಿ

31 ನೀರಾವರಿ ಬೇಸಾಯ —ಎಸ್. ಎ. ಹೊಸಮನಿ

32 ಸಾರ್ವಜನಿಕ ಅಭಿಪ್ರಾಯ –ಎನ್. ರಾಜಗೋಪಾಲರಾವ್

33 ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ

—ದೇವೇಂದ್ರಕುಮಾರ ಹಕಾರಿ

34 ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ

—ಜಿ. ಡಿ. ನಾಡಕರ್ಣಿ

35 ಫ್ಯಾಶನ್ನುಗಳು —ಕೆ. ಡಿ. ತಂಗೋಡ

36 ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ

—ಬಿ. ವ್ಹಿ. ಮಲ್ಲಾಪುರ

37 ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ
—ಎಸ್. ಜಿ. ಕರಭಂಟನಾ

38 ಕನ್ನಡ ಜೈನಪುರಾಣಗಳು —ಎ. ಎನ್. ನಾಯ

39 ಕನ್ನಡ ನಾಟ್ಯಸೃಷ್ಟಿ —ಎಚ್. ಜಿ. ಲೋಕ

40 ಹರಿಹರನು ಚಿತ್ರಿಸಿದ ಶಿವಶರಣೆಯರು —ಬಿ. ಬಿ. ಹೆಂ

41 ನೀವು ಬಯಸುವ ಮಗು ಗಂಡೋ? ಹೆಣ್ಣೋ?
—ಕೆ. ಆರ್. ರಾಮಸ್ವಾ

42 ಆಂಡಯ್ಯ —ಬಿ. ಎಸ್. ಕುಲಕಣಿ

43 ಬೆಳವಲನಾಡಿನ ಬೆಳೆಗಳು —ಎಸ್. ಎ. ಹೊಸಮ

44 ಜಾನಪದ ಕಥೆಗಳು —ಎಲ್. ಆರ್. ಹೆಗ

45 ಸುಧಾರಿಸಿದ ಬೇಸಾಯ —ಎ. ಸಿ. ಕಲ್ಯಾಣಿಮ

46 ಕನ್ನಡ ನಾಡಿನ ಐತಿಹಾಸಿಕ ಮಹಾಪುರುಷರು
—ಬಿ. ಆರ್. ಗೋಪಾಲ್

47 ಗ್ರಂಥಾಲಯದ ಅಂತರಂಗ —ಎಸ್. ಆರ್. ಗುಂಜಾ

48 ಸ್ತ್ರೀ ಮತ್ತು ಶಿಕ್ಷಣ —ವನಮಾಲಾ ಆಚಾರ್

49 ಜಾಗತಿಕ ಸರಕಾರ —ಸಿ. ವೀರಬಸ

50 ಸಮುದಾಯ ಸಂಘಟನೆ—ಎಚ್. ಎಂ. ಮರುಳಸಿದ್ಧಯ್ಯ

51 ಅಶೋಕನ ಧರ್ಮಶಾಸನಗಳು —ಶ್ರೀನಿವಾಸ ರಿತ್ತಿ

52 ಪ್ರಾಚೀನ ಭಾರತದ ರಾಜ್ಯಪದ್ಧತಿ—ಸಿ. ವ್ಹಿ. ರಂಗಸ್ವಾಮಿ

53 ಅಕ್ಕಮಹಾದೇವಿ ಮತ್ತು ಮೀರಾಬಾಯಿ
—ಎಸ್. ಎಸ್. ಕಬ್ಬಿನ

54 ಕನ್ನಡ ಕಾವ್ಯದಲ್ಲಿ ವೀರರಸನಿರೂಪಣೆ
—ಬಿ. ಬಿ. ಮಹೀಶವಾಡಿ

5 ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು
—ಬಿ. ಸಿ. ಜವಳಿ

6 ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀಲ

7 ಪಂಚಾಯತಿ ರಾಜ್ಯ
—ಎಸ್. ಜಿ. ಕರಭಂಟನಾಳ ಮತ್ತು ಕೆ. ಡಿ. ಬಸವ

8 ವಿಷಮಜ್ವರ —ಪಿ. ಎಸ್. ಶಂಕರ

9 ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

0 ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬಿಗೇರಿ

1 ಗ್ರಾಮಾಭ್ಯುದಯದ ಯೋಜನಾಂಗಗಳು
—ಟಿ. ಕೆ. ಮೇಟಿ

2 ಹರಿಜನರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರ
—ಎಸ್. ಕೆ. ಕಡೆತೋಟದ

3 ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

4 ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

5 ಹೃದಯಾಘಾತ —ಪಿ ಎಸ್. ಶಂಕರ್

6 ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ
—ಡಿ ಎ. ಚಿಕ್ಕಿ

7 ಶ್ರೀ ರಾಮಾಯಣದರ್ಶನದಲ್ಲಿ ಕುವೆಂಪು ಸೃಜಿಸಿದ
ಮೂರು ಪಾತ್ರಗಳು —ಎಂ. ಜಿ. ಬಿರಾದಾರ

8 ಯೋಜನೆಗಳೇಕೆ ಬೇಕು? —ಎಸ್. ಎಸ್. ಯಮ್ಮಿ

9 ಸಗರನಾಡಿನ ಶಿವಶರಣರು —ವ್ಹಿ. ಶಿವಾನಂದ

0 ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ
—ಆರ್. ಎಸ್. ಭೂಸನೂರಮಠ

1 ವಿಜಯನಗರದ ನಿರ್ಣಾಯಕ ಯುದ್ಧ
—ಎಸ್. ಬಿ ಕೋಡದ

72 ಬಸವಣ್ಣನವರನ್ನು ಕುರಿತ ಶಾಸನಗಳು
—ಎಂ. ಎಂ. ಕಲಬುರ್ಗಿ

73 ಆಧುನಿಕ ಭಾಷಾವಿಜ್ಞಾನ —ಜಿ. ಎಸ್. ಕುಳ್ಳಿ

74 ಪುರಾಣ ಜಿಜ್ಞಾಸೆ —ಎಲ್. ಆರ್. ಹೆಗಡೆ

75 ಭಾರತದಲ್ಲಿ ಶೈಕ್ಷಣಿಕ ಪ್ರಯೋಗ—ವ್ಹಿ. ಎಸ್. ಕುಲಕರ್ಣಿ

76 ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು
—ಎ. ಸಿ. ಕಲ್ಯಾಣಿಮಠ

77 ಕನ್ನಡ ನುಡಿಯ ಬೆಳವಣಿಗೆ —ಎಚ್. ಜಿ. ಲೋಕೂರ

78 ಹರಿಹರನ ಗಿರಿಜಾಕಲ್ಯಾಣ —ಬಿ. ವ್ಹಿ. ಶಿರೂರ

79 ಹೊಟ್ಟೆಯ ಹುಣ್ಣು —ಪಿ. ಎಸ್. ಶಂಕರ

80 ಸಂಯೋಜಕ ಶಕ್ತಿ —ಬಿ. ಜಿ. ಜ್ಯೋತಿ

81 ಸಂಸದೀಯ ಸರಕಾರವು ಭಾರತಕ್ಕೆ ಒಪ್ಪುವುದೇ?
—ವಸಂತ ಪಾಟೀಲ

82 ನಮ್ಮ ರೈತರೇಕೆ ಹಿಂದುಳಿದಿದ್ದಾರೆ? —ಎಂ. ಸಿ. ಕೊಡ್ಲಿ

83 ನಗೆಗಾರ ನಯಸೇನ —ಎಂ. ಎಸ್. ಸುಂಕಾಪುರ

84 ಶೂನ್ಯಸಂಪಾದನೆ —ವ್ಹಿ. ಎಸ್. ಕಂಬಿ

85 ಮಹಮೂದ ಗವಾನ —ಎಲ್. ಆರ್. ಕುಲಕರ್ಣಿ

86 ಕೆಳದಿಯ ನಾಯಕರು —ಜಿ. ಎಸ್. ದೀಕ್ಷಿತ

87 ಮುಳುಗುಂದನಾಡು —ಎಸ್. ಎಚ್. ರಿತ್ತಿ

88 ಶ್ವಾಸಕೋಶಕ್ಷಯ —ಪಿ. ಎಸ್. ಶಂಕರ

89 ಕರ್ನಾಟಕದಲ್ಲಿ ಗ್ರಂಥಾಲಯಗಳು
—ಎಸ್. ಆರ್. ಗುಂಜಾಳ

90 ಮಿರ್ಜಾ ಘಾಲಿಬ್ —ಅಬ್ದುಲ್. ಮಜೀದಖಾನ್